# ಕೊಡಗು ಸಂಗಾತಿ

ಡಿಸೆಂಬರ್ 1 ರಿಂದ 31, 2001

ಪಾಕ್ಷಿಕ ಪತ್ರಿಕೆ

(ಜಾರ್ದ 15-29 - ಪೆರಾರ್ದ 1-16)

ನಂ. ೩೫, ಸವಿತಾ ನಿಲಯ, ೧ನೇ ಕ್ರಾಸ್, ೪ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - ೫೭೦ ೦೧೨

ಸಂಪಾದಕಿ : ಪಟ್ಟಡ ಶೀಲಾಮಣಿ Registered : 10-01-96 TCI Kar. 09592 ಕನ್ನಡ ಮತ್ತು ಅರೆಗನ್ನಡ ಭಾಷೆಲಿ ಪ್ರಕಟಿತ

Reg. No. KA/SK/MYS-88 ಸಂಪುಟ : 5 ಸಂಚಿಕೆ : 23-24 ಪುಟಗಳು : 24 ಬೆಲೆ ರೂ. : 12-00



ಜನಾಂಗದ ಹಿತಚಿಂತಕ ನಾಡಿನ ಶ್ರೇಯೋಭಿವೃದ್ಧಿ ಬಯಸಿದ "ದೊಡ್ಡಣ್ಣ" ನೆಂದೆ ಖ್ಯಾತಿ ಗಳಿಸಿದ ಹಿಂದಿನ ತಲೆಮಾರಿನ ದಿ॥ ನಂಗಾರು ಅಪ್ಪಣ್ಣ ಸೋಮಪ್ಪ

ಲೇಖನ : ಒಳಪುಟದಲ್ಲಿ.

ನಾಡಿನ ಸಮಸ್ತ ಜನತೆಗೆ ಹುತ್ರಿ ಹಬ್ಬದ ಶುಭಾಶಯಗಳು

|| ಶ್ರೀ ವೆಂಕಟ್ರಮ್ಣ ದೇವ್ರ ಪಾದಕ್ಕೆ ||







## ನಮ್ಮೆಲ್ಲಾ ಕುಲಬಾಂಧವ್ಕೆ ಮತ್ತೆ ಸ್ನೇಹಿತವ್ಕೆ ದೀಪಾವಳಿಯ ಸುಭಾಸಯ ಉಟ್ಟು

ತಾರೀಖ್ 21-10-2001 ಐತ್ವಾರ ನಮ್ಮ ಮಕ್ಳ ಮದ್ವೆ ಮಡ್ಕೇರಿ ಕೆಳ್ಗಿನ ಗೌಡ ಸಮಾಜ್ಲಿ ನಡ್ಸ್‌ಕಾಕ್ನ ನೀವೆಲ್ಲ ಬಂದ್ ಆವ್ರ ತಲ್ಗೆ ಆಕ್ಕಿಕಾಳ್ ಹಾಕಿ ಆಸೀರ್ವಾದ ಮಾಡ್ದರಿ. ನಮ್ಗೆಲ್ಲಾ ತುಂಬಾ ಕುಸಿ ಆತ್. ಹಂಗೆನೆ ನಿಮ್ಗೆ ಕೂಡಾ ಶ್ರೀ ವೆಂಕಟ್ರಮ್ಣ ಮತ್ತೆ ಶ್ರೀ ಕಾವೇರಿ ಮಾತೆ ಸಹ ತುಂಬಾ ಉಸಾರ್, ಆಯಿಸ, ಸಂಪತ್ತ್ ಎಲ್ಲಾ ಕೊಟ್ ಕಾಪಾಡಲೀತೇಳಿ ನಾವ್ ಕೇಳ್ಕಂಡ್ವೆ.

ಗೂಡೆ:
ಕುದುಕುಳಿ ನೂತನ



ಹೈದ:
ದೇವಜನ ದಯಾನಂದ (ಬಬ್ಲು)
(ರೇಂಜರ್, ಉಡುಪಿ)

## ನೀವೆಲ್ಲಾ ಬಂದ್ ಆಸೀರ್ವಾದ ಮಾಡ್ದಕ್ಕೆ ಗ್ಯಾನ ಮಾಡಿಕಂಬವು :

ಕುದುಕುಳಿ
ಶ್ರೀಮತಿ ಬೋಜಮ್ಮ ಮತ್ತೆ ಕೆ. ಟಿ. ರಾಮಪ್ಪ
ಉದಯ ಪ್ರೆಸ್
ಬಸ್ಟೆಂಡ್, ಸೋಮವಾರ್ಪೇಟೆ - 571 236
☎ :ಅಂಗ್ಡಿ :82074, ಮನೆ : 82274
ಎಸ್ಟಿಡಿ : 08276

ದೇವಜನ
ಶ್ರೀಮತಿ ಚಂದ್ರಮ್ಮ ಸುಬ್ಬಯ್ಯ
ಹೊಸ ಬಡಾವಣೆ, ಮಡ್ಕೇರಿ - 571 201
☎ : 29467 ಎಸ್ಟಿಡಿ : 08272



# 2001, ಡಿಸೆಂಬರ್ 1 ರಿಂದ 31 ರ ತನಕ

## ಒಳನೋಟ 




| | |
|---|---|
| ಚಂದಾ ಕಳುಹಿಸುವ ಮತ್ತು ಜಾಹೀರಾತು ಪ್ರಸಾರ ಕಛೇರಿ | **ಕೊಡಗು ಸಂಗಾತಿ,** 35, "ಸವಿತಾ ನಿಲಯ", 1ನೇ ಕ್ರಾಸ್, 4ನೇ ಬ್ಲಾಕ್, ಜಯಲಕ್ಷ್ಮಿ ಪುರಂ, ಮೈಸೂರು- 12. ಫೋನ್ : **0821/516771** |
| ಮಡಿಕೇರಿಯಲ್ಲಿ ಸಂಗಾತಿ ಕಛೇರಿ ಚಿಹ್ನೆ, ಹಸೆಮಣೆ/ ಶುಭಾಶಯ ಕಾರ್ಡ್ಸ್/ ಕ್ಯಾಸೆಟ್ ಕೀ ಚೈನ್ ಲಭ್ಯ | ಬೈತಡ್ಕ ಜಾನಕಿ ಬೆಳ್ಯಪ್ಪ, ನಂ. 21-16 ಎಲ್. ಐ. ಸಿ. ಹತ್ತಿರ, ರೇಸ್ ಕೋರ್ಸ್ ರಸ್ತೆ, ಮಡಿಕೇರಿ, ಫೋನ್ : **08272/28047** |
| | ಚೆರಿಯಮನೆ ರಮೇಶ್, C/o ಪಾಂಡ್ಯನ್ ಕ್ಯಾಸೆಟ್ ಅಂಗಡಿ, ಖಾಸಗಿ ಬಸ್ ನಿಲ್ದಾಣ, ಮಡಿಕೇರಿ, ಫೋನ್: 08272/29620 |
| ವಿರಾಜಪೇಟೆ | ಬಾರಿಕೆರ ಮನೋಜ್‌ಕುಮಾರ್, ಇಗ್ಗುತ್ತಪ್ಪ ಕೋಲ್ಡ್ ಸ್ಟೋರ್, ಖಾಸಗಿ ಬಸ್ ನಿಲ್ದಾಣ, ವೀರಾಜಪೇಟೆ ಫೋನ್: 08274/56591 |
| ಕುಶಾಲ ನಗರ | ಕುಂಬಗೌಡನ ಸೋಮಣ್ಣ, ಮಯೂರ ಕೋಲ್ಡ್ ಸ್ಟೋರೇಜ್, ಮುಖ್ಯ ರಸ್ತೆ, ಕುಶಾಲನಗರ- 571 234 ಫೋನ್: 08276/73370 |
| ಬೆಂಗಳೂರು ಮಹಾನಗರ | ಕಲ್ಲುಮುಟ್ಲು ಬಸಪ್ಪ, ನಂ. 37, 3ನೇ ಮೇನ್, ನಂಜಪ್ಪ ಬ್ಲಾಕ್, ಕೆಂಪೇಗೌಡ ನಗರ, ಬೆಂಗಳೂರು-19, ಫೋನ್: 080/6500946 |

ಚಂದಾ ವಿವರ: ಜೀವಾವಧಿ ಸದಸ್ಯತನ- **2000** ರೂ., ಬಿಡಿ ಪ್ರತಿ- **6** ರೂ.

ವಾರ್ಷಿಕ ಚಂದಾ - **150** ರೂ. (ಅಂಚೆ ವೆಚ್ಚ ಸೇರಿ), ಒಲೆಗೊಂದರಂತೆ ಸದಸ್ಯರಾಗಿ ಕೊಂಡು ಓದಿ.

# ಸಂಪಾದಕೀಯ : ಹಣ್ಣು ಹಂಪಲು, ತರಕಾರಿ ಬೆಳೆಯುವ- ಮಾರಾಟದ ವ್ಯವಸ್ಥೆ

ಕೊಡಗಿನ ರೈತರು ಕಾಫಿಗೆ ಬೆಲೆ ಹೆಚ್ಚಾದ ಕಾರಣ ಹಣ್ಣು ಹಂಪಲು ಮತ್ತು ತರಕಾರಿಯನ್ನು ಬೆಳೆಯುವ ಪ್ರವರ್ತಿಯನ್ನು ನಿಲ್ಲಿಸಿ ಪೇಟೆ ಪಟ್ಟಣಗಳಲ್ಲಿ ಜಿಲ್ಲೆಯ ಹೊರಗಿನಿಂದ ಬರುವ ತರಕಾರಿ ಹಣ್ಣು ಹಂಪಲುಗಳನ್ನು ಖರೀದಿಸಿ ಮನೆಗಳಿಗೆ ಕೊಂಡೊಯ್ಯುವ ಪ್ರವೃತ್ತಿ ಪ್ರಾರಂಭವಾಯಿತು. ಈಗ ಕಾಫಿಯ ಬೆಲೆ ಕುಸಿದಿದ್ದರೂ ತರಕಾರಿಯನ್ನು ಹಣ್ಣು ಹಂಪಲುಗಳನ್ನು ಕ್ರಯಕ್ಕೆ ತರುವ ಪ್ರವೃತ್ತಿ ಮುಂದುವರಿಯುತ್ತಿದೆ. ಇದಕ್ಕೆ ಕಾರಣ ಹಿಂದೆ ಬಸ್, ಜೀಪು, ರಿಕ್ಷಾಗಳಿಲ್ಲದ ಕಾಲದಲ್ಲಿ ರೈತರು ತಾವು ಬೆಳೆದ ಹಣ್ಣು ಹಂಪಲು ತರಕಾರಿಗಳನ್ನು ತಲೆ ಹೊರೆ, ಕುದುರೆಯಲ್ಲಿ, ಎತ್ತಿನಗಾಡಿಯಲ್ಲಿ, ಸಾಗಿಸಿ ಹತ್ತಿರದ ಸಂತೆಯಲ್ಲಿ ಮಾರಾಟ ಮಾಡುತ್ತಿದ್ದರು. ಈಗ ತಲೆಹೊರೆಯಲ್ಲಿ ಹೋಗುವವರೂ ಇಲ್ಲ. ಪೆಟ್ರೋಲ್ ಬೆಲೆ ಹೆಚ್ಚಾದುದರಿಂದ ಸಣ್ಣ ಪ್ರಮಾಣದ ಹಣ್ಣು ಹಂಪಲುಗಳನ್ನು ಜೀಪ್ ರಿಕ್ಷಾದಲ್ಲಿ ಸಾಗಿಸಿದರೆ ಸಾಗಾಣಿಕೆ ವೆಚ್ಚ ಹೆಚ್ಚಾಗಿ ಬೆಳೆಸಿದ ಖರ್ಚು ಸಿಗದೆ ಸಣ್ಣ ಮತ್ತು ಅತೀ ಸಣ್ಣ ರೈತ ಹಣ್ಣು ಹಂಪಲನ್ನು ತರಕಾರಿಯನ್ನು ಬೆಳೆಸುವ ಹವ್ಯಾಸವನ್ನೇ ಬಿಟ್ಟು ಬಿಟ್ಟಿದ್ದಾರೆ.

ಹಿಂದೆ ಸಣ್ಣ ಮತ್ತು ಅತೀ ಸಣ್ಣ ರೈತರು ತರಕಾರಿ, ಹಣ್ಣು, ಹಂಪಲುಗಳನ್ನು ಬೆಳೆಸಿ ತಮ್ಮ ಒಂದು ವಾರದ ಸಂತೆ ಸಾಮಾನುಗಳನ್ನು ಈ ರೀತಿ ಮಾರಿದ ಹಣದಿಂದ ಜೀವನವನ್ನು ಸಾಗಿಸುತ್ತಿದ್ದರು. ಈಗ ಕಾಫಿಗೂ ಬೆಲೆ ಇಲ್ಲ. ಜನರ ಕೂಲಿ ಹೆಚ್ಚಾಗಿ ತರಕಾರಿ ಹಣ್ಣು ಹಂಪಲನ್ನು ಬೆಳೆದು ಸಂಪಾದಿಸುವ ಸಂದರ್ಭ ತಪ್ಪಿ ಹೋಗಿ ರೈತ ಹಣದ ಮುಗ್ಗಟ್ಟಿಗೆ ಸಿಕ್ಕಿ ಕೊಂಡಿದ್ದಾನೆ.

ಇವುಗಳನ್ನು ಹೋಗಲಾಡಿಸುವುದಕ್ಕೆ ರೈತರೆಲ್ಲಾ ಸೇರಿ ತಾವು ಬೆಳೆಸಿದ ಹಣ್ಣು ತರಕಾರಿಗಳನ್ನು ಸಾಗಿಸಿ ಮಾರಾಟ ಮಾಡುವ ಏರ್ಪಾಡು ಮಾಡಿದರೆ ರೈತ ಆರ್ಥಿಕ ಸ್ಥಿತಿಯನ್ನು ಸುಧಾರಿಸಲು ಸಾಧ್ಯವಾಗಬಹುದೆಂದು ಸಂಗಾತಿ ಬಯಸುತ್ತದೆ.

## ಸಣ್ಣ ಪುಲಿಕೋಟು ಶ್ರೀ ಭಗವತಿ ದೇವಾಲಯದ ಸಮಿತಿ ರಚನೆ

ಭಾಗಮಂಡಲ ಸನಿಹದ ಸಣ್ಣ ಪುಲಿಕೋಟು ಗ್ರಾಮದ ಶ್ರೀಮಂದಿತಿರುಕೆ (ಭಗವತಿ) ದೇವಾಲಯದ ಜೀರ್ಣೋದ್ಧಾರದ ನೂತನ ಸಮಿತಿಯನ್ನು ಇತ್ತೀಚೆಗೆ ರಚಿಸಲಾಯಿತು.

ಸಮಿತಿಯ ಅಧ್ಯಕ್ಷರಾಗಿ ಕುಯ್ಯಮುಡಿ ಉದಯಕುಮಾರ್, ಉಪಾಧ್ಯಕ್ಷರಾಗಿ ಪಟ್ಟಮಾಡ ಅಪ್ಪಣ್ಣ, ಕಾರ್ಯದರ್ಶಿಯಾಗಿ ಉದಿಯನ ಹರೀಶ್, ಉಪಕಾರ್ಯದರ್ಶಿಯಾಗಿ ಕಾವೇರಿಮನೆ ಶೇಖರ, ಸದಸ್ಯರಾಗಿ ಕುಯ್ಯಮುಡಿ ಯದುಕುಮಾರ, ಸುನಿಲ್ ಕೆ. ಡಿ., ಕೆ. ಟಿ. ಜಗದೀಶ್, ಚಂಗೀರ ಪೂರ್ಣಯ್ಯ, ಕೆ. ಬಿ. ಗಣಪತಿ, ಕೆ. ಕೆ. ಪ್ರಕಾಶ್ ಕಾರ್ಯಪ್ಪ, ಪಮ್ಮಡಿ ರವಿ, ಉದಿಯನ ಲವ ಇವರುಗಳು ಆಯ್ಕೆಯಾದರೆ, ಕುಯ್ಯಮುಡಿ ಎಸ್ ನೀಲಾರಾಮ್‌ಗೌರವ ಸದಸ್ಯರಾಗಿ ಸಮಿತಿಯಲ್ಲಿರುತ್ತಾರೆ.

- ಕುಯ್ಯಮುಡಿ ಡಿ. ಸುನಿಲ್

## ಕನ್ನಡದ ಕೆಲವು ಪ್ರಥಮಗಳು

1) ಕನ್ನಡದ ಮೊದಲ ಕಾವ್ಯ - ಆದಿಕವಿ ಪಂಪನ ಆದಿ ಪುರಾಣ (ಕ್ರಿ. ಶ. 941)
2) ಕನ್ನಡದ ಮೊದಲ ಸಾಮಾಜಿಕ ಕಾದಂಬರಿ - ಗುಲ್ವಾಡಿ ವೆಂಕಟರಾಯರ ಇಂದಿರಾಬಾಯಿ
3) ಕನ್ನಡದ ಮೊದಲ ಶಾಸ್ತ್ರ ಗ್ರಂಥ - ಕವಿರಾಜಮಾರ್ಗ (ಕ್ರಿ. ಶ. 850)
4) ಕನ್ನಡದ ಮೊದಲ ಗದ್ಯ ಕೃತಿ - ವಡ್ಡಾರಾಧನೆ (ಕ್ರಿ. ಶ. 920)
5) ಕನ್ನಡದ ಮೊದಲ ಮುಸ್ಲಿಂ ಕವಿ - ಶಿಶುನಾಳ ಷರೀಫ ಸಾಹೇಬ
6) ಕನ್ನಡದ ಮೊದಲ ನಿಘಂಟು - ಕರ್ನಾಟಕ ಶಬ್ದಸಾರ
7) ಕನ್ನಡದ ಮೊದಲ ದಿನಪತ್ರಿಕೆ - ಮಂಗಳೂರು ಸಮಾಚಾರ
8) ಕನ್ನಡದ ಮೊದಲ ಸ್ನಾತಕೋತ್ತರ ಕೇಂದ್ರ - ಮದರಾಸು ವಿಶ್ವವಿದ್ಯಾಲಯ
9) ಕನ್ನಡ ಸಾಹಿತ್ಯದ ಮೊದಲ ವೃತ್ತಪತ್ರಿಕೆ - ವಾಗ್ಭೂಷಣ (ಸಂಪಾದಕರು- ಬೆನಗಲ್ ರಾಮರಾಯರು)
10) ಕನ್ನಡ ಸಾಹಿತ್ಯ ಪರಿಷತ್ತಿನ ಮೊದಲ ಅಧ್ಯಕ್ಷರು - ಎಚ್. ವಿ. ನಂಜುಂಡಯ್ಯ
11) ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಮೊದಲ ಅಧ್ಯಕ್ಷ - ಎಚ್. ವಿ. ನಂಜುಂಡಯ್ಯ
12) ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಮೊದಲ ಮಹಿಳಾ ಅಧ್ಯಕ್ಷೆ - ಜಯವಂತಿ ತಾಯಿ ಲಿಗಾಡೆ
13) ಕೇಂದ್ರ ಸಾಹಿತ್ಯ ಅಕಾಡಮಿ ಪ್ರಶಸ್ತಿ ಪಡೆದ ಮೊದಲ ಕನ್ನಡ ಸಾಹಿತಿ - ಕುವೆಂಪು
14) ಜ್ಞಾನಪೀಠ ಪ್ರಶಸ್ತಿ ಪಡೆದ ಮೊದಲ ಕನ್ನಡ ಸಾಹಿತಿ - ಕುವೆಂಪು

ಗೋವಿಂದಮ್ಮನ ಪ್ರವೀಣಕುಮಾರ: ನಂ. 36, 'ಸೌರಭ, 3ನೇ ಮುಖ್ಯ ರಸ್ತೆ, 11ನೇ ಅಡ್ಡರಸ್ತೆ, ಪ್ರಶಾಂತನಗರ, ಬೆಂಗಳೂರು - 79

ಕಿಚ್ಚಿಗೆ ಇರುವೆ ಮುತ್ತುವುದೇ (ಕ್ರೂರಿಗಳ ಸಮೀಪಕ್ಕೆ ಹೋಗಲು ಜನರು ಹಿಂಜರಿಯುವರು)

# ಭಾಷೆ ಮತ್ತು ಸಂಸ್ಕೃತಿ ಬಗ್ಗೆ ತಾಯಿಯ ಕರ್ತವ್ಯ

ಬುದ್ಧಿ, ಜ್ಞಾನವೆಂಬುದು ಮನುಷ್ಯನಿಗೆ ಗುಪ್ತ ಧನ. ಇದನ್ನು ಕಲಿಯಲು ಶಾಲಾ, ಕಾಲೇಜಿನ ವಿದ್ಯಾಭ್ಯಾಸ ಬೇಕಾಗಿಲ್ಲ. ಶಾಲಾ ಕಾಲೇಜಿನ ವಿದ್ಯೆ ಗಳಿಕೆಗೆ ಬರುವ ವಿದ್ಯೆ, ವಾದ ವಿವಾದಗಳ ವಿದ್ಯೆ, ಹೊಟ್ಟೆ ಪಾಡಿನ ವಿದ್ಯೆ, ಅಪೇಕ್ಷೆ, ಮಾಹಾಪೇಕ್ಷೆಯ ವಿದ್ಯೆ ಮೋಕ್ಷದ ವಿದ್ಯೆ ಅಲ್ಲ. ಹೃದಯದ ವಿದ್ಯೆ ಮೋಕ್ಷಕ್ಕೆ ವಿದ್ಯೆ.

ಯಾವುದೇ ವಿದ್ಯೆಯಾಗಲಿ ಅದನ್ನು ಕಲಿಯಬೇಕಾದರೆ ನಮ್ಮ ಶರೀರವೆಂಬ ಯಂತ್ರದಲ್ಲಿ ಸುಲಲಿತ ಚಾಲನೆಯಿರಬೇಕು. ಅಂದರೆ ಹೃದಯ ಶುದ್ಧತೆ, ರಕ್ತ ಶುದ್ಧತೆ, ಅಂಗಾಂಗಗಳ ಶುದ್ಧತೆ, ಮನಸ್ಸಿನ ಸ್ವಚ್ಛತೆ ಮತ್ತು ಶುದ್ಧತೆ. ಬುದ್ಧಿಯ ಸಮತೋಲನ ಇವು ಮುಖ್ಯ. ಕಳೆದು ಹೋದದನ್ನು ಗಳಿಸಬಹುದು, ಶರೀರವೇ ಹೋದರೆ ಗಳಿಸಲಿಕ್ಕೇನಿದೆ? ಅಂಗಾಂಗಗಳ ಸ್ವಚ್ಛತೆಯೇ ನಮಗೆ ಆಮ್ಲ ಜನಕ. ನಮಗೆ ಜೀವ ವಾಯುವೇ ಸತ್ಯ. ಸತ್ಯವೇ ದೇವರು. ದೇವರೇ ಸತ್ಯ. ಲೋಕವಿದ್ಯೆ (ಸೆಕ್ಯೂಲರ್) ಜೀವನಕ್ಕೆ. ಅಧ್ಯಾತ್ಮಿಕ ವಿದ್ಯೆ ಶಾಶ್ವತಕ್ಕೆ.

ಮನುಷ್ಯ ಎಂದರೆ ಬುದ್ಧಿ, ಶರೀರ ಮತ್ತು ಆತ್ಮದ ಸಮ್ಮಿಳನ. ಅದನ್ನೇ Mind, Body and Atma. (M.B.A.) ಎನ್ನುತ್ತೇವೆ. Mind ಬುದ್ಧಿ, ಪ್ರಾಣಿಗೂ ಇವೆ. ಮನುಷ್ಯರಿಗೂ ಇದೆ. ಮನುಷ್ಯನಿಗೆ ವಿವೇಕ, ವಿಮರ್ಶೆ ಶಕ್ತಿ ಇದೆ. ಆದ್ದರಿಂದ ಮನುಷ್ಯರಾದ ನಾವು ನಮ್ಮ ಬುದ್ಧಿ, ಪ್ರಾಣಿ ಬುದ್ಧಿಯೋ ಅಥವಾ ಮಾನವ ಬುದ್ಧಿಯೋ ಎಂಬುದನ್ನು ಮೊಟ್ಟ ಮೊದಲು ಕಂಡುಕೊಳ್ಳಬೇಕು. ಹೃದಯದ ಪ್ರತಿಬಿಂಬವೇ ನಮ್ಮ ಮುಖ. ಬಿಂಬದಂತೆ ಪ್ರತಿಬಿಂಬ, ಮನಸ್ಸಿನಂತೆ ಕ್ರಿಯೆ, ಕ್ರಿಯೆಯಂತೆ ಕರ್ಮ. ಮನಸ್ಸಿನ ಬಿಂಬವೇ, ಕರ್ಮವೆಂಬ ಪ್ರತಿಬಿಂಬ. ಅದನ್ನೇ ಕಂಪನ (Vibrations) ಎನ್ನುತ್ತೇವೆ, ಕಂಪನದಲ್ಲಿ ಅನುಕಂಪವಿರಬೇಕು.

ಈ ಅತ್ಯಮೂಲ್ಯವಾದ ವಿದ್ಯೆ ಅಥವಾ ಬುದ್ಧಿಯನ್ನು ಯಾವಾಗ ಯಾರು ಹೇಗೆ ಕಲಿಯಬೇಕು? ಉತ್ತರ: ಯಾವಾಗ? ಸಣ್ಣವರಿರುವಾಗ ಭಾಷೆ ಕಲಿಯಲು ಸುರು ಮಾಡುವಾಗ. ಯಾರು? ನಾನೇಕಲಿಯಬೇಕು. ಹೇಗೆ ಕಲಿಯಬೇಕು? ಯಾರಿಂದ ಕಲಿಯಬೇಕು? ಹೆತ್ತ ತಾಯಿಯಿಂದ ಕಲಿಯಬೇಕು. ಆದೇ ಮಾತೃ ದೇವೋಭವ. ತಾಯಿಯ ತೋಳಿನಲ್ಲಿ, ತಾಯಿಯ ತೊಡೆಯಲ್ಲಿ, ತಾಯಿಯ ಬಾಯಿಂದ, ತಾಯಿಯ ಹೃದಯದಿಂದ ವಿದ್ಯೆ ಮಕ್ಕಳಿಗೆ ಬರಬೇಕು. ಇದಕ್ಕಾಗಿ ನಾವು ಶಾಲೆ ಕಲಿಯಬೇಕಾಗಿಲ್ಲ. ಡಿಗ್ರಿ ಸಂಪಾದಿಸಬೇಕಿಲ್ಲ. ಒಂದು ಲೆಕ್ಕದಲ್ಲಿ ಇಂದಿನ ಡಿಗ್ರಿ ವಿದ್ಯೆ ಕಲಿತವರಿಂದ ನಮಗೆ ನಮ್ಮ ಭಾಷೆಗೆ, ನಮ್ಮ ಸಂಸ್ಕೃತಿಗೆ ಧಕ್ಕೆಯಾಗುತಲ್ಲೇ ಇದೆ. ಇಂದು ಎಲ್ಲಾ ತಾಯಂದಿರು ತಮ್ಮ ಮಗುವು, ಇಂಗ್ಲೀಷ್ ಕಲಿಯಬೇಕು. ಇಂಗ್ಲೀಷಿನಲ್ಲೇ ತಿನ್ನಬೇಕು. ಇಂಗ್ಲೀಷಿನಲ್ಲೇ ಮಲಮೂತ್ರ ವಿಸರ್ಜನೆ ಮಾಡಬೇಕು. ಇಂಗ್ಲೀಷಿನಲ್ಲಿ ನಗಬೇಕು. ಇಂಗ್ಲೀಷಿನಲ್ಲೇ ಅಳಬೇಕು ಇದೇ ತಂದೆ ತಾಯಂದಿರ ಜೀವನದ ಉದ್ದೇಶ. ಇಂಗ್ಲೀಷ್ ಕಲಿಯಬಾರದೆಂದಿಲ್ಲ. ಎಲ್ಲಾ ಭಾಷೆ ಕಲಿಯಬೇಕು. ಇತರ ಭಾಷೆಗೆ ನಮ್ಮ ತಾಯಿ ಭಾಷೆ, ಅವ್ವ ಭಾಷೆ ಅಡಿಪಾಯವಾಗಬೇಕು. ಇತರ ಭಾಷೆ, ಸಂಸ್ಕೃತಿಯಿಂದ ನಮ್ಮ ಭಾಷೆ, ಸಂಸ್ಕೃತಿ ಬೆಳೆಯಬಾರದು. ಇದರಲ್ಲಿ ನಮ್ಮ ತಾಯಂದಿರ ಪಾತ್ರವೇನು? ನಮ್ಮ ತಾಯಿಯಂದಿರು ಎಷ್ಟರ ಮಟ್ಟಿಗೆ ನಮ್ಮ ಭಾಷೆ, ಸಂಸ್ಕೃತಿ, ಸಂಪ್ರದಾಯವನ್ನು ಅಳವಡಿಸಿ ಕೊಂಡಿದ್ದಾರೆ?

ತಾಯಿಯು ಮೊಟ್ಟ ಮೊದಲು ತಾನು ತನ್ನತನವನ್ನು ಅರಿಯಬೇಕು. ಮೊಟ್ಟ ಮೊದಲ ಭಾಷೆ ಅವ್ವಾ' ಅಥವಾ 'ಅಮ್ಮ'. ಶಾಲೆಯ ಭಾಷೆ ಪಪ್ಪ; ಮಮ್ಮಿ. ಅವ್ವಾ, ಅಮ್ಮ ಎಂಬುದೇ ಹೃದಯ ಭಾಷೆ. ನಂತರ ತಾಯಿ ಹೇಳಿದವರನ್ನು 'ತಂದೆ ಎಂದು ಗುರ್ತಿಸುತ್ತದೆ. ಮಗು ತಂದೆಯನ್ನು ತಂದೆಯೆಂದು ನಂಬಬೇಕಾದರೆ ಗುರ್ತಿಸಬೇಕಾದರೆ ಅದು ತಾಯಿ ಕಲಿಸಿದ ಪಾಠ. ಅದು ಜೀವನ ಪರಿಯಂತದ ಪಾಠ. ತಂದೆ ತಾಯಿಯ ಮೇಲೆ ಪ್ರೀತಿ, ವಿಶ್ವಾಸ ಬೆಳೆದ ನಂತರ ಎರಡನೇ ಪಾಠ. ಬುದ್ಧಿ, ನಡತೆ(Character) ಅದರ ತಳಹದಿ ತಾಯಿ. ಮಣ್ಣಿನ ದೀಪಕ್ಕೆ (ದೇವರು) ನಮಿಸು. ಹಿರಿಯರ ಕಾಲುಮುಟ್ಟಿ ಆಶೀರ್ವಾದ ಪಡಿ. ಸುಳ್ಳು ಹೇಳಬೇಡ, ಹಠ ಮಾಡಬೇಡ. ಜಗಳವಾಡಬೇಡ, ಚಾಡಿ, ವಂಚನೆ ಮೋಸ ಮಾಡಬೇಡ, ಕೆಟ್ಟ, ಶಬ್ಧ, ಭಾಷೆ ಕಲಿಯಬೇಡ, ಆಡಬೇಡ. ಪ್ರೀತಿಯಿಂದಿರು, ಪ್ರೀತಿ ತೋರಿಸು, ಪ್ರೀತಿಯಲ್ಲಿಯೇ ಬದುಕು. ಈ ವಿದ್ಯೆ ನಮ್ಮ ಸಂಸ್ಕೃತಿಗೆ ತಳಹದಿ. ಭಾಷೆಗೆ ತಳಹದಿ 'ಅವ್ವಾ' ಸಂಸ್ಕೃತಿಗೆ ತಳಹದಿ ತಾಯಿ ಕಲಿಸಿದ ಬುದ್ಧಿ. ಅದಕ್ಕಾಗಿ ಸಂಸಾರದಲ್ಲಿ ಅವ್ವನಿಗೆ ಯಾ ತಾಯಿಗೆ ಮಹತ್ವ. ಹಾಗಾದರೆ ತಂದೆ? ಸಂತಾನೋತ್ಪತ್ತಿಯಲ್ಲಿ ಸ್ತ್ರೀ, ಪುರುಷರು ಸಮಭಾಗಿಗಳು. ಕರ್ತವ್ಯದಲ್ಲಿ ಸಹಭಾಗಿಗಳು. ತಂದೆಯಿಂದ ಸಣ್ಣ ಮಗುವಿನ ಬುದ್ಧಿ ಬೆಳವಣಿಗೆಸಾಧ್ಯವೇ ಇಲ್ಲ. ಅದು ತಾಯಿಯಿಂದಲೇ ಸಾಧ್ಯ. ಕಾರಣ ತಾಯಿಯ ಸಹಜಗುಣಗಳಿಂದ ಕೀರ್ತಿ(ಹೆಸರು) ಶ್ರೀ(ಆದಿ ಮತ್ತು ಅಂತ್ಯ); ವಾಕ್ಕು (ಮಾತು), ಸ್ಮೃತಿ (ಆಲೋಚನೆ) ಮೇಧಸ್ಸು, (ಸ್ವಭಾವಿಕ ಗುಣ, ಧೃತಿ (ಧೃಡತೆ) ಮತ್ತು ಕ್ಷಮೆ (ಕ್ಷಮಿಸುವ ಗುಣ: (ಭಗವದ್ಗೀತೆ) ಇಂತಾ ಗುಣಗಳು ಪುರುಷರಲ್ಲಿರಲು ಸಾಧ್ಯವಿಲ್ಲ. ಅದು ಪ್ರಕೃತಿ ನಿಯಮ. ಆದ್ದರಿಂದಲೇ ಸ್ತ್ರೀಯರು ಕೆಟ್ಟರೆ ಕುಲನಾಶ ಎನ್ನುತ್ತಾರೆ. ನಮ್ಮ ಸ್ವಾಭಾವಿಕ ಭಾಷೆಯಲ್ಲಿ ಎಲ್ಲದ್ದಕ್ಕೂ 'ಅವ್ವನೆ ..... ಎಂದು ಸುರು ಮಾಡುತ್ತೇವೆ. ಅವ್ವನ ಎಂಬುದು ಪವಿತ್ರ. ಆದರೆ ಅದನ್ನು ಪೂರ್ಣಗೊಳಿಸುವುದು ಸಂಸ್ಕೃತಿ ಅಲ್ಲ. ಹೀಗಾಗಿ ತಾಯಿಯೇ ಪ್ರಥಮ ಆಶ್ರಯದಾತೆ, ವಿದ್ಯೆದಾತೆ, ಭಾಷೆದಾತೆ, ಸಂಸ್ಕೃತಿದಾತೆ. ಇಂತಹ ಮಹತ್ವಗಳಿಂದಲೇ ಸ್ತ್ರೀಯನ್ನು ಪೂರ್ವಿಕರು ಪೂಜಿಸುತ್ತಿದ್ದರು. ಇಂದಿಗೂ ಸ್ತ್ರೀಯ ಹೆಸರಿನಿಂದ ಪುರುಷನನ್ನು ಗುರ್ತಿಸುತ್ತಾರೆ. ಉದಾಹರಣೆ : ಪಾರ್ವತಿ, ಪರಮೇಶ್ವರ, ಲಕ್ಷ್ಮೀನಾರಾಯಣ ಹೀಗೆ. ಕಾರಣ ಪ್ರೀತಿಯೇ ಸ್ತ್ರೀಯ ಭಂಡಾರ. ಆದರೆ ಇಂದು ಪಾಶ್ಚಿಮಾತ್ಯದ ಸಂಸ್ಕೃತಿರಹಿತ ವಿದ್ಯೆಯಲ್ಲಿ ಪ್ರೀತಿಯನ್ನು ಕಾಮರೂಪವಾಗಿ ಬಣ್ಣಿಸಿ

ಅಪವಿತ್ರಗೊಳಿಸುತ್ತದೆ. ಟಿ. ವಿ., ಸಿನೆಮಾ ಮಾಧ್ಯಮಗಳು ಕಾಮವೇ ಪ್ರೀತಿ ಎಂದು ಬಣ್ಣಿಸುತ್ತೇವೆ. ನಾವು ಅದಕ್ಕೆ ಮರುಳಾಗುತ್ತೇವೆ. ತಪ್ಪು ಯಾರದು? ನಮ್ಮ ನಮ್ಮ ಆಲೋಚನೆಯದು.

ಭಾಷೆ ಮತ್ತು ಸಂಸ್ಕೃತಿ ಕಲಿಸುವುದು ತಾಯಿಯ ಕರ್ತವ್ಯವೆಂದು ಇತರರು ಸುಮ್ಮನಿರುವುದು ಘೋರಪಾಪ. ಇತರರ ಸಹಬಾಳ್ವೆ, ಸಹಕಾರ ಪ್ರೀತಿ, ಪ್ರೇಮ, ವಾತ್ಸಲ್ಯ, ದೃಢತೆ ಇಲ್ಲದಿದ್ದರೆ ತಾಯಿ ಅಸಹಾಯಕಳಾಗುತ್ತಾಳೆ. ಅವಳ ಕಣ್ಣಲ್ಲಿ ನೀರು ಬರುವುದು. ಯಾವ ಮನೆಯಲ್ಲಿ ಸ್ತ್ರೀ ಕಣ್ಣೀರಿಟ್ಟುಕೊಂಡು ಜೀವಿಸುತ್ತಾರೋ ಆ ಮನೆ ಕುಲನಾಶವಾಗುವುದು. ಅಂತಾ ಮನೆಯಲ್ಲಿ ಲಕ್ಷ್ಮಿ ನೆಲೆಸಲು ಸಾಧ್ಯವೇ ಇಲ್ಲ. ಇದನ್ನು ಪುರುಷರು ಅರಿಯಬೇಕು. ಸ್ತ್ರೀ ಪುರುಷರು ನಾಣ್ಯದ ಎರಡು ಮುಖ. ಸಹಬಾಳ್ವೆ, ಅರಿತ ಬಾಳ್ವೆ, ನುರಿತ ಬಾಳ್ವೆ, ಸಮಾನತೆ, ಸಂದೇಹ ರಹಿತ ಜೀವನ, ಒಬ್ಬರನ್ನೊಬ್ಬರು ಅರಿತು, ಒಬ್ಬರಿಗೊಬ್ಬರು ತಮ್ಮ ತಮ್ಮ ಸ್ವಾಭಿಮಾನವನ್ನು ಇಟ್ಟುಕೊಂಡು ನಡೆಯುವುದೆ ಜೀವನ. ಇನ್ನೊಬ್ಬರ ಸ್ವಾಭಿಮಾನವನ್ನು ಕೆಣಕಲು ಹೋದರೆ ಅದೇ ನರಕ ಜೀವನ. ಒಬ್ಬರು ಇನ್ನೊಬ್ಬರ ಸ್ವಾಭಿಮಾನವನ್ನು ಅರಿತು ರಕ್ಷಿಸಬೇಕು.

ನಾವು ನಮ್ಮ ಸಮಾಜವೆನ್ನುತ್ತೇವೆ. ಅವರವರಿಗೆ ಅವರವರ ಸಮಾಜ ಶ್ರೇಷ್ಠ. ಸಮಾಜದಿಂದ ನಮ್ಮನ್ನು ನಾವು ಉದ್ಧಾರ ಮಾಡಿಕೊಳ್ಳಬಹುದು. ತಪ್ಪಿದರೆ ನಮ್ಮನ್ನು ನಾವು ಸಮಾಧಿ ಮಾಡಿಕೊಳ್ಳಲೂ ಬಹುದು. ಇಂದು ನಮ್ಮ ಸಮಾಜಗಳು ಸಮಾಜವಾಗಿಲ್ಲ. ಅದೊಂದು ಕಲ್ಯಾಣ ಮಂಟಪ ಮಾತ್ರ. ಬರುತ್ತಾರೆ, ಸೇರುತ್ತಾರೆ, ತೋರ್ಪಡಿಸಿಕೊಳ್ಳುತ್ತಾರೆ, ಅಹಂಕಾರ, ಅಲಂಕಾರವೆಂಬ ಖಾರ ಮಾತನ್ನಾಡುತ್ತಾರೆ, ಉಂಡು ಕುಡಿದು ತಪ್ಪನ್ನು ಹೆಕ್ಕಿಕೊಂಡು ಹೋಗುತ್ತಾರೆ. ಇದಕ್ಕಾಗಿ ಸಮಾಜ ಕಟ್ಟಬೇಕೇ? ಇಂತಾ ಸಮಾಜಗಳಿಂದ ನಮ್ಮ ಭಾಷೆ, ಸಂಸ್ಕೃತಿ, ಸಂಪ್ರದಾಯ ಉಳಿಯದು. ಅಳಿವುದು ಖಂಡಿತ.

ನಾವು ನಮ್ಮ ಭಾಷೆ, ಸಂಸ್ಕೃತಿಯನ್ನು ಕಲಿಯಬೇಕು. ಕಲಿಸಬೇಕು, ಉಳಿಸಬೇಕು, ಬೆಳೆಸಬೇಕು. ಇತರರಿಗೆ ಬೆಳಕನ್ನು ಕೊಡಬೇಕು. ಇದು ಹೇಗೆ ಸಾಧ್ಯ? ಹೇಗೆ ಎಂದು ಆಲೋಚಿಸಬೇಕು. ಮನಸ್ಸು ಮಾಡಬೇಕು. ನಿರ್ಧಾರ ಮಾಡಬೇಕು. ನಿರ್ಧರಿಸಿದ ಕಾರ್ಯ ನೆರವೇರಿಸಬೇಕು. ಮೊಟ್ಟ ಮೊದಲು ಹೆತ್ತ ತಾಯಿ ತನ್ನ ಭಾಷೆ, ಸಂಸ್ಕೃತಿ, ಸಂಪ್ರದಾಯದ ಪಾಠವನ್ನು ಕಲಿಯಬೇಕು. ಹೊತ್ತು ಹೆತ್ತ ಮಗುವಿಗೆ ಕಲಿಸಬೇಕು. ತಪ್ಪು ಮಾಡದ ಹಾಗೆ ಅಪ್ಪ, ಅಮ್ಮ ಜಾಗರೂಕತೆ ವಹಿಸಬೇಕು. ಅದಕ್ಕೆ ಸಮಾಜ ನೆರವಾಗ ಬೇಕು. ಪ್ರತೀಯೋರ್ವನೂ ತನ್ನನ್ನು, ತನ್ನ ಕುಲಧರ್ಮ, ತನ್ನ ಸಂಸ್ಕೃತಿ, ಭಾಷೆಯನ್ನೇ ಪ್ರೋತ್ಸಾಹಿಸಬೇಕು. ಅದಕ್ಕಾಗಿ ಪ್ರತೀ ಸಮಾಜ, ಮಕ್ಕಳ ವಸತಿ ಗೃಹಗಳಲ್ಲಿ ಅಧ್ಯಯನ ಕೇಂದ್ರವನ್ನು ಕಡ್ಡಾಯವಾಗಿ ಸ್ಥಾಪಿಸಿ, ಪೋಷಿಸಿ, ಅನುಕರಿಸಿ ಬೆಳೆಸಬೇಕು. ಅಧ್ಯಯನ ಕೇಂದ್ರವೆಂದರೆ ಅಲ್ಲಿ ಸಾಮಾನ್ಯ ಪ್ರಜ್ಞೆಯ ರೀತಿ, ನೀತೀ, ಭಾಷೆ, ಸಂಸ್ಕೃತಿಯನ್ನು ಪಸರಿಸುವ ಪುಸ್ತಕಗಳಿರಬೇಕು. ಇತರರ ಸಂಸ್ಕೃತಿ, ಭಾಷೆಯನ್ನು ಕಲಿಯುವುದು ಒಳ್ಳೇದು. ಸಾಧ್ಯವಾದರೆ ಭಾಷಾಂತರಿಸುವುದೂ ಉತ್ತಮ. ಇದಕ್ಕೆ ಹಣ ಸಹಾಯ ಧಾರಾಳವಾಗಿ ಬರಬೇಕು. ದುರಾದೃಷ್ಟವೆಂದರೆ ಇಂದು ನಮ್ಮ ಸಮಾಜದಲ್ಲಿ ಜನರು ಐದುನೂರು ರೂಪಾಯಿಯನ್ನು ಮಧ್ಯಸೀಸೆಗೆ ಹಣ ನೀಡುತ್ತಾರೆ. ವಿದ್ಯೆ, ಭಾಷೆ ಸಂಸ್ಕೃತಿಯ ಬೆಳವಣಿಗೆಗೆ ಕೇವಲ 5 ರೂಪಾಯಿ ನೀಡುವುದಿಲ್ಲ ಎಂತಹ ವಿಪರ್ಯಾಸ. ಅಂತವರಿಗೆ ಮಧ್ಯ ಸೀಸೆಯೇ ಸಂಸ್ಕೃತಿಯಾಗಿದೆ. ಇದು ನಿಲ್ಲಬೇಕು. ಪ್ರಾಣಿ ಜೀವನದಿಂದ ಮಾನವ ಜೀವನಕ್ಕೆ ಬರಬೇಕು. "ಅಸತೋಮಾ ಸದ್ಗಮಯ, ತಮಸ್ಸೋಮಾ ಜ್ಯೋತಿರ್ಗಮಯ ಮೃತ್ಯೋಂಮಾ ಅಮೃತಂಗಮಯ" ಇದೇ ಬಾಳಿನ, ಬದುಕಿನ ಧ್ಯೇಯ.

ಇದು ಕಷ್ಟಕರವೆಂದು ಬಿಡುವಂತದ್ದಲ್ಲ. ಮಾಡಿ ಆಚರಿಸುವಂತದ್ದು. ಆಚರಿಸಲೇಬೇಕಾದ್ದು. ನೀವು ಒಳ್ಳೇ ಮನಸ್ಸು ಮಾಡುವಿರಾ? ಜನಾಂಗ ಜನಾಂಗವೆಂದು ಹೊಡೆದಾಡದಿರಿ. ಜನಾಂಗ ಜನಾಂಗವನ್ನು ಪ್ರೀತಿ, ಸಹನೆ ಎಂಬ ಸೂಜಿ ದಾರದಿಂದ ಹೊಲಿದು ಒಂದುಗೂಡಿಸಿ. ಕಾವೇರಮ್ಮ ಮತ್ತು ಕುಲದೇವತೆ ವೆಂಕಟರಮಣ ನಮಗೆ ಸದ್ಬುದ್ಧಿ ಕೊಡಲಿ. ನಮ್ಮ ಭಾಷೆ, ಸಂಸ್ಕೃತಿ ಬೆಳೆಯಲಿ ಮತ್ತು ಬೆಳೆಯಬೇಕು.

- ಶ್ರೀ ಚೇಂದ್ರಿಮಾಡ ಗ. ಮುತ್ತಪ್ಪ, ಕುಶಾಲನಗರ

---

## ಮನುಷ್ಯ ಎಂಬ ಮೂರಕ್ಷರದವನ ಕಥೆ

ಮನುಷ್ಯ ಎಂಬ ಮೂರಕ್ಷರದವನು
ಜನನಿ ಎಂಬ ಮೂರಕ್ಷರದವಳ ಮಗನಾಗಿ
ಜಗತ್ತು ಎಂಬ ಮೂರಕ್ಷರಕ್ಕೆ ಬಂದು
ಶಿಕ್ಷಕ ಎಂಬ ಮೂರಕ್ಷರದ ಸಹಾಯದಿಂದ
ಶಿಕ್ಷಣ ಎಂಬ ಮೂರಕ್ಷರವನ್ನು ಕಲಿತು
ಯವ್ವನ ಎಂಬ ಮೂರಕ್ಷರಕ್ಕೆ ಕಾಲಿಟ್ಟು
ಮದುವೆ ಎಂಬ ಮೂರಕ್ಷರರವನ್ನು ಹೊಂದಿ
ಮಡದಿ ಎಂಬ ಮೂರಕ್ಷರದವಳ ಜೊತೆ
ಸಂಸಾರ ಎಂಬ ಮೂರಕ್ಷರದ
ಸಾಗರ ಎಂಬ ಮೂರಕ್ಷರದಲ್ಲಿ ಈಜಿ
ಮಕ್ಕಳು ಎಂಬ ಮೂರಕ್ಷರದ ಮುತ್ತುಗಳನ್ನು
ನಾಡಿಗೆ ಎಂಬ ಮೂರಕ್ಷರಕ್ಕೆ ಕಾಣಿಕೆ ಕೊಟ್ಟು
ಮುದುಕ ಎಂಬ ಮೂರಕ್ಷರದ ಪಟ್ಟ ಹೊತ್ತು
ಮರಣ ಎಂಬ ಮೂರಕ್ಷರವನ್ನು ಹೊಂದುತ್ತಾನೆ
ಮನುಷ್ಯ ಎಂಬ ಮೂರಕ್ಷರದವನ ಕಥೆ ಇಲ್ಲಿಗೆ ಮುಗಿಯಿತು
ವಿಮಲ ಎಂಬ ಮೂರಕ್ಷರದ
ಹುಡುಗಿ ಎಂಬ ಮೂರಕ್ಷರದವಳು
ಮನುಷ್ಯ ಎಂಬ ಮೂರಕ್ಷರದವನ ಕಥೆಯನ್ನು
ಕವನ ಎಂಬ ಮೂರಕ್ಷರದಲ್ಲಿ ಬರೆದವಳು.

- ಜೈನೀರ ವಿಮಲ ಧನಂಜಯ,
ಬೆಂಗಳೂರು

---

ಕುರುಡ ಬಲ್ಲನೇ ಹಗಲು - ಇರುಳ

# ಬದಲಾಗುತ್ತಿರುವ ಪೋಷಕರ ಒಲವು - ಮಕ್ಕಳಲ್ಲಿ ಪರಿಣಾಮ

ನಮ್ಮ ನಾಡಲ್ಲಿ ನಂಬಿಕೆಯ ಬುನಾದಿಯ ಮೇಲೆ ಜೀವಿಸುವ ಜನತೆಗಳಿಗೇನೂ ಕೊರತೆಯಿಲ್ಲ. ಒಮ್ಮೆ ಒಂದು ವಿಚಾರವನ್ನು ನಂಬಿದರೆಂದರೆ ಅದು ಸರಿಯೋ? ತಪ್ಪೋ? ವಿಚಾರಿಸದೆ ಆ ನಂಬಿಕೆಯಲ್ಲೆ ಬಾಳ ಸವೆಸುತ್ತಾರೆ. ಈ ರೀತಿಯ ನಂಬಿಕೆಯಿಂದಲೇ ಇಂದು ತಮ್ಮ ತನವ ಬಿಟ್ಟು ಆಡಂಬರ ಜೀವನ ಸ್ವೀಕರಿಸುವುದರ ಜೊತೆಗೆ ತಮ್ಮ ಮಕ್ಕಳಲ್ಲೂ ಆಡಂಬರ ಆದರ್ಶ ತತ್ವ ತುಂಬಿ ಅದರ ವೈಚಾರಿಕ ಚಿಂತನೆಗೆ ಅವಕಾಶ ಮಾಡಿಕೊಡದೆ ಅವರ ಬದುಕನ್ನು ಕೇವಲ ಯಂತ್ರದಂತೆ ರೂಪಿಸುತ್ತಾ ಮಕ್ಕಳ ಭವಿಷ್ಯಕ್ಕೆ ಮುಳ್ಳಾಗುತ್ತಿರುವ ಪೋಷಕರು ಇಂದು ನಮ್ಮ ನಾಡಲ್ಲಿ ಶೇ. 75 ರಷ್ಟು ಇದ್ದಾರೆ.

ಇಂದು ಪೋಷಕರು ತಮ್ಮ ಮಕ್ಕಳ ಮನಸ್ಸಿನ ಮೇಲೆ ಸಂಪೂರ್ಣ ಹತೋಟಿ ಸಾಧಿಸುವ ಯತ್ನದಲ್ಲೇ ತೊಡಗಿ ಮಕ್ಕಳ ಆಸಕ್ತಿಗೆ ತಣ್ಣೀರೆರಚುತ್ತಾ ಸಾಗಿರುವುದು ಶೋಚನೀಯ ಸಂಗತಿಯಾಗಿದೆ. ಮಕ್ಕಳು ಬೆಳಿಗ್ಗೆ ಏಳುವುದರಿಂದ ಶಾಲೆಗೆ ಹೋಗಿ ಬಂದು ಸಂಜೆ ಮಲಗುವತನಕ ಅವರದು ಕೇವಲ ಯಾಂತ್ರಿಕ ಕ್ರಿಯೆಯೇ ಆಗಿದೆ. ಈ ರೀತಿಯ ಮಕ್ಕಳ ಮೇಲಿನ ಸಂಪೂರ್ಣ ಪೋಷಕರ ಹತೋಟಿಯಿಂದ ಇಂದು ಶಾಲಾ ದಿನಗಳಲ್ಲಿ ಕಂಡು ಬರುವ ಮಕ್ಕಳ ತುಂಟಾಟ, ಮರಕೋತಿ ಆಟ, ಕಳ್ಳ ಪೋಲೀಸ್, ಲಗೋರಿ ಇವೆಲ್ಲಾ ಇಂದು ಮೂಲೆ ಗುಂಪಾಗಿದೆ. ಮಕ್ಕಳು ಪ್ರಕೃತಿಯ ಒಡನಾಟದೊಡನೆ ಬೆಳೆಯುವುದು ಅಪಾಯಕಾರಿ ಎಂಬುದು ಪೋಷಕರವಾದವಾಗಿದೆ.

ಇತ್ತೀಚಿನ ದಿನಗಳಲ್ಲೂ ಪೋಷಕರು ಮಕ್ಕಳ ಮಕ್ಕಳುತನವನ್ನು ಅರ್ಥ ಮಾಡಿಕೊಳ್ಳದೆ ಅವರ ಎಳೆಯ ಮನಸ್ಸಿನ ಮೇಲೆ ಭವಿಷ್ಯದ ಯೋಚನೆಯನ್ನೇ ತುಂಬುತ್ತಾ, ಮಕ್ಕಳು ದೊಡ್ಡವರಂತೆ ವರ್ತಿಸುವುದನ್ನು, ಅವರು ಭವಿಷ್ಯದ ಯೋಚನೆಗೆ ಒಳಗಾಗಿ ಅದರ ಬಗ್ಗೆ ಚಿಂತಿಸುವುದನ್ನು ಕಾಣಬಯಸುತ್ತಾರೆ. ಈ ರೀತಿಯಾಗಿ ಪೋಷಕರು ಮಕ್ಕಳಲ್ಲಿ ತುಂಬುವ ಪ್ರಬುದ್ಧತೆಯ ಅಂಶ ಇಂದು ಅವರನ್ನು ಕೇವಲ ಯಂತ್ರದಂತೆ ರೂಪಿಸುತ್ತಿದೆ.

ಇನ್ನು ಮಕ್ಕಳನ್ನು ಸೇರಿಸುವ ಸಂದರ್ಭದಲ್ಲಂತೂ ಪೋಷಕರು ಪ್ರತಿಷ್ಠೆಗೆ ಒಳಗಾಗುತ್ತಿದ್ದಾರೆ. "ಆಂಗ್ಲ ಭಾಷೆಯು ವಿಶ್ವಭಾಷೆ" ಎಂದು ಆ ಭಾಷೆಯ ಕಲಿಕೆಯ ಪ್ರತಿಷ್ಠೆಯ ಸಂಕೇತ ಎಂದು ತಿಳಿದು ಮಗುವಿಗೆ ಮಾತೃಭಾಷಾ ಶಿಕ್ಷಣವನ್ನು ನೀಡದೇ ವಂಚಿಸುತ್ತಿದ್ದಾರೆ. ಪುಟ್ಟ ಮಗುವೊಂದು ತನ್ನ ಎರಡನೇ ವಯಸ್ಸಿನಿಂದಲೇ ತನ್ನ ಮನೆಯ ಆಡುಭಾಷೆಯೊಂದಿಗೆ ಮಾತು ಆರಂಭಿಸುತ್ತದೆ. ಮತ್ತು ಆ ಭಾಷೆ ಮಗುವಿಗೆ ಸುಲಲಿತವಾಗಿರುತ್ತದೆ. ಉಳಿದಂತೆ ಬೇರೆ ಭಾಷಾ ಸಂವಹನ ಅದಕ್ಕೆ ಅಪರಿಚಿತವಾಗಿದ್ದು ಆ ಭಾಷೆಯಲ್ಲಿ (ಅನ್ಯ ಭಾಷೆ) ಶಿಕ್ಷಣ ಪಡೆಯುವ ಮಗುವಿಗೆ ಶಿಕ್ಷಣ ಎಂದರೆ ಕಷ್ಟಕರ ಎಂಬಂತಹ ಭಾವನೆ ಎಳೆಯ ಮನಸ್ಸಿನ ಮೇಲೆ ಬೀರಿ ಈ ನಂಬಿಕೆಯಿಂದ ಅವರ ಶೈಕ್ಷಣಿಕ ಜೀವನಕ್ಕೆ ಮಾರಕವಾಗ ಬಹುದು.

ನಮ್ಮ ಪೋಷಕರ ಈ ರೀತಿಯ ನಿಲುವಿನಿಂದಲೇ ನಗರಗಳಲ್ಲಿ ನಾಯಿಕೊಡೆಗಳಂತೆ ಆಂಗ್ಲ ಮಾಧ್ಯಮ ಕಾನ್ವೆಂಟ್‌ಗಳು ಬೆಳೆಯುತ್ತಿದೆ. ಇನ್ನು ನಗರಗಳಲ್ಲಿ ರಜಾ ದಿನಗಳಲ್ಲೂ ಮಕ್ಕಳನ್ನು ಮುಂದಿನ ತರಗತಿಗೆ ಸಿದ್ಧಗೊಳಿಸುವ ಟ್ಯೂಷನ್‌ಗೋ ಅಥವಾ ಮತ್ತಾವುದೋ ಶಿಬಿರಕ್ಕೂ ಸೇರಿಸುವುದರ ಮೂಲಕ ಅವರಿಗೆ ಮುಕ್ತವಾಗಿ ಆಟವಾಡಲು ಬಿಡದೇ, ಮಕ್ಕಳ ಯಾಂತ್ರಿಕ ಜೀವನಕ್ಕೆ ಪೋಷಕರು ಸೂತ್ರಧಾರಿಗಳಾಗಿದ್ದಾರೆ.

ಈ ಬಗೆಯ ವಾತಾವರಣ ಗ್ರಾಮ ಪ್ರದೇಶಗಳಲ್ಲೂ ಕಾಣಬಹುದು. ಕೇವಲ ಪಾಠಪಠನೆಯಿಂದಲೇ ಜ್ಞಾನ, ವಿದ್ಯೆ ಎಂದುತಿಳಿದಿರುವ ಇಲ್ಲಿನ ಬಹುತೇಕ ಪೋಷಕರು ಮಕ್ಕಳಿಗೆ ಪಠ್ಯೇತರದ ಯಾವ ಸೌಲಭ್ಯವನ್ನು ಒದಗಿಸದೇ ಕೇವಲ ಪುಸ್ತಕದ ಮುಂದೆ ಮಕ್ಕಳನ್ನು ಬೆದರಿಸಿ ಕೂರಿಸುತ್ತಿರುವವರ ಸಂಖ್ಯೆಯೇ ಅಧಿಕ. ಇಲ್ಲಿಯೂ ಕೂಡ ಮಕ್ಕಳ ಆಸಕ್ತಿಗೆ ಗಮನ ನೀಡದೇ ಕೇವಲ ಪುಸ್ತಕದ ಹುಳುಗಳನ್ನು ರೂಪಿಸಲು ಮುನ್ನಡೆವ ಪೋಷಕರೇ ಬಹುವಾಗಿದ್ದಾರೆ.

ಈ ರೀತಿ ತಮ್ಮ ದೃಷ್ಟಿಕೋನದಲ್ಲೇ ಯೋಚಿಸುವ ಈ ಮಂದಿ ಮಕ್ಕಳಲ್ಲಿ ಇರುವ ಪ್ರತಿಭೆಯನ್ನು ಗುರುತಿಸಲಾರದೇ ಮಕ್ಕಳ ಜೀವನವನ್ನು ಯಂತ್ರದಂತೆ ರೂಪಿಸುತ್ತಿರುವುದರಿಂದ ಇಂದು ಮಕ್ಕಳಲ್ಲಿ ಬಾಲ್ಯ ಸಹಜ ಚಟುವಟಿಕೆಗಳನ್ನು ಕಾಣುವುದೆ ಅಪರೂಪ. ಅವರಲ್ಲಿ ಕ್ರಿಯಾಶೀಲತೆ, ಪ್ರತಿ ಅನುಕರಣೀಯ ಗುಣಸ್ನೇಹದ ಮಹತ್ವ, ಪ್ರೀತಿ ಮುಂತಾದವು ಬೆಳೆಯದೇ, ಅತಂತ್ರ ಮನಸ್ಥಿತಿ ಉಂಟಾಗಿ ಮತ್ತು ಕಷ್ಟ ಕಾಲದಲ್ಲಿ ಮುನ್ನುಗ್ಗುವ ಧೈರ್ಯವಿರದೇ ಮಕ್ಕಳು ಕೇವಲ ಕೀಲಿ ಕೊಟ್ಟ ಬೊಂಬೆಯಂತೆ ವರ್ತಿಸುವುದನ್ನು ಕಾಣಬಹುದು.

ಈ ರೀತಿಯ ಪೋಷಕರ ಮನಸ್ಥಿತಿ ಎಲ್ಲಿಯವರೆಗೆ ಇರುತ್ತದೆಯೋ, ಅಲ್ಲಿಯವರೆಗೂ ಮಕ್ಕಳಲ್ಲಿ, ಸಹಜತೆಯನ್ನು ಕಾಣುವುದು ಕಷ್ಟ. ಈ ರೀತಿಯ ಒತ್ತಡ ಪರಿಸ್ಥಿತಿ ಅವರ ಮೇಲೆ ಖಚಿತವಾಗಿ ದುಷ್ಪರಿಣಾಮ ಬೀರುತ್ತದೆ.

- ಬಿಟ್ಟೀರ ವೈನಿ ರಾಮಯ್ಯ, ಮಡಿಕೇರಿ.

---

## ಶುಭ ವಿವಾಹ

ಭಾಗಮಂಡಲ ಸಮೀಪ ಕೋರಂಗಾಲ ಗ್ರಾಮದ ನಂಗಾರು ಗಣಪತಿಯವರ ಪ್ರಥಮ ಪುತ್ರಿ ಜಯಮಾಲಳಿಗೂ ಮತ್ತು ಮದೆನಾಡು ಗ್ರಾಮದ ಮುದ್ದೆನ ತಮ್ಮಣ್ಣನವರ ಪ್ರಥಮ ಪುತ್ರ ಕುಮಾರನಿಗೂ ದಿನಾಂಕ 22-10-2001 ರಂದು ಮಡಿಕೇರಿಯ ಮೇಲಿನ ಗೌಡ ಸಮಾಜದಲ್ಲಿ ಮದುವೆ ಚೆನ್ನಾಗಿ ಕಳೆಯಿತು.

**ಕೊಡಗು ಸಂಗಾತಿ, ಪಾಕ್ಷಿಕನ್ನ ತಕ್ಕಂಡೊದಕು**

**ಚಿಕ್ಕ ಮೀನನ್ನು ದೊಡ್ಡ ಮೀನು ನುಂಗುತ್ತದೆ (ದುರ್ಬಲರನ್ನು ಬಲಿಷ್ಠರು ನಾಶ ಪಡಿಸುತ್ತಾರೆ)**

# ಜನಾಂಗದ ಪ್ರತಿಭೆಗಳನ್ನು ಬೆಳೆಸುವುದು ಪ್ರತಿಯೊಬ್ಬ ನಾಯಕರ ಕರ್ತವ್ಯವಾಗಬೇಕು:

## ಕೊಡಗು ಬಿ.ಜೆ.ಪಿ. ಅಧ್ಯಕ್ಷ ಕೊಂಬಾರನ ಬೋಪಯ್ಯನವರ ಬಿಚ್ಚುನುಡಿ



'ಬಾಡಿ ಹೋದ ಬಳ್ಳಿಲೀಗ ಹೂವು ಅರುಳಬಲ್ಲುದೇ?' ವಿರಹಿಗಳು ಹಾಡುವ ಸಾಲದು. ಯಾವುದೇ ಪ್ರತಿಭೆಯನ್ನು ಪೋಷಿಸದೇ ಹೋದರೆ ಅದು ಅರಳಲು ಸಾಧ್ಯವಾಗದು. ಆದರೂ ತಮ್ಮ ಸ್ವಸಾಮರ್ಥ್ಯದಿಂದ ಕೆಲವು ಪ್ರತಿಭೆಗಳು ತಮ್ಮ ವೇದಿಕೆಯನ್ನು ತಾವೇ ಸ್ಥಾಪಿಸಿಕೊಂಡು ಮೇಲೆ ಬಂದು ಅರಳಿ ಬಿಡುತ್ತದೆ. ಹೀಗೆ ಬಡತನದಲ್ಲೇ ಹುಟ್ಟಿ, ಬೆಳೆದು ಪ್ರತಿಭಾವಂತನಾಗಿ, ರಾಜಕೀಯ ಪ್ರವೇಶಿಸಿ ಹಂತ ಹಂತವಾಗಿ ಯಶಸ್ಸಿನ ಮೆಟ್ಟಿಲೇರಿ ಇಂದು ಕೊಡಗು ಜಿಲ್ಲಾ ಬಿ.ಜೆ.ಪಿ. ಅಧ್ಯಕ್ಷರಾಗಿ, ಹಿರಿಯ ಹಾಗೂ ಖ್ಯಾತ ವಕೀಲರಾಗಿ ಚಿರಪರಿಚಿತರಾಗಿರುವವರು ಶ್ರೀ ಕೊಂಬಾರನ ಗಣಪತಿ ಬೋಪಯ್ಯನವರು. ಇವರನ್ನು 'ಕೊಡಗು ಸಂಗಾತಿ ಸಂದರ್ಶಿಸಿದಾಗ ಅವರಾಡಿದ ಬಿಚ್ಚುನುಡಿಗಳನ್ನು ನೇರವಾಗಿ ನಿಮ್ಮ ಮುಂದಿಡುತ್ತಿದ್ದೇವೆ.

**ಕೊ. ಸಂ.:** ನಿಮ್ಮ ಪರಿಚಯವನ್ನು ತಿಳಿಸುವಿರಾ?

ಉ: ನಾನು ಕಾಲೂರು ಗ್ರಾಮದ ಕೊಂಬಾರನ ಗಣಪತಿ ಮತ್ತು ಚಿಣ್ಣಮ್ಮ ದಂಪತಿಗಳ ಮೂವರು ಪುತ್ರರಲ್ಲಿ ಕೊನೆಯವನಾಗಿ 1953ರಲ್ಲಿ ಜನಿಸಿದೆ. ನನ್ನ ಪ್ರಾಥಮಿಕ ವಿದ್ಯಾಭ್ಯಾಸವನ್ನು ಕಾಲೂರು - ಗಾಳಿಬೀಡುವಿನಲ್ಲಿ ಮುಗಿಸಿ, ಚೆಟ್ಟಳ್ಳಿ ಪ್ರೌಢಶಾಲೆಯಲ್ಲಿ ಹೈಸ್ಕೂಲ್ ವಿದ್ಯಾಭ್ಯಾಸವನ್ನು ಮಡಿಕೇರಿಯಲ್ಲಿ, ಪದವಿ ವಿದ್ಯಾಭ್ಯಾಸವನ್ನು ಪಡೆದು ಬೆಂಗಳೂರಿನ ಬಿ. ಎಂ. ಎಸ್. ಕಾಲೇಜಿನಿಂದ ಕಾನೂನು ಪದವಿಯನ್ನು ಪಡೆದುಕೊಂಡಿರುತ್ತೇನೆ.

**ಕೊ. ಸಂ.:** ನೀವು ರಾಜಕೀಯ ಪ್ರವೇಶಿಸಲು ಕಾರಣವೇನು?

ಉ. : ಮೂಲತಃ ನಾನು ಆರ್. ಎಸ್. ಎಸ್. ಹಿನ್ನೆಲೆಯನ್ನು ಪಡೆದುಕೊಂಡದ್ದು ರಾಜಕೀಯ ಪ್ರವೇಶಕ್ಕೆ ಪ್ರೇರಣೆಯಾಯಿತು. ತುರ್ತುಪರಿಸ್ಥಿತಿಯ ಸಂದರ್ಭದಲ್ಲಿ ಎರಡು ವರ್ಷ ಜೈಲು ವಾಸವನ್ನು ಅನುಭವಿಸಿದ್ದೆ. ಬೆಂಗಳೂರಿನಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದಾಗ ಎ.ಬಿ.ವಿ.ಪಿ. ನಾಯಕನಾಗಿಯೂ ಜವಾಬ್ದಾರಿ ನಿರ್ವಹಿಸಿದ್ದೆ. ಇದರ ಜೊತೆಗೆ ಆರ್.ಎಸ್.ಎಸ್.ನ ಪ್ರಚಾರಕರ ಸಂಪರ್ಕದಿಂದ ನಾನು ರಾಜಕೀಯ ಪ್ರವೇಶಿಸುವಂತಾಯಿತು.

**ಕೊ. ಸಂ. :** ಕಳೆದ ವಿಧಾನಸಭಾ ಚುನಾವಣೆಯಲ್ಲಿ ಜಿಲ್ಲೆಯಲ್ಲಿ ಎರಡು ಸ್ಥಾನಗಳನ್ನು ಬಿ.ಜೆ.ಪಿ. ಕಳೆದುಕೊಂಡದ್ದು ಅದರ ದುರ್ಬಲತೆಯ ಸಂಕೇತವೇ?

ಉ. : ಜಿಲ್ಲೆಯಲ್ಲಿ ಬಿ.ಜೆ.ಪಿ. ದುರ್ಬಲಗೊಂಡಿಲ್ಲ. ಮತದಾರರು ಪಕ್ಷದ ಜೊತೆಯಲ್ಲೆ ಇದ್ದಾರೆ. ಆದರೆ ಮಡಿಕೇರಿ ಮತ್ತು ವಿರಾಜಪೇಟೆಗಳ ವಿಧಾನಸಭಾ ಕ್ಷೇತ್ರಗಳಲ್ಲಿ ಅಭ್ಯರ್ಥಿಗಳ ಆಯ್ಕೆಯಲ್ಲಿ ಗೊಂದಲವೇರ್ಪಟ್ಟು ಪಕ್ಷ ಸೋಲುವಂತಾಯಿತು. ಆದರೆ ಸಂಸತ್ ಚುನಾವಣಾ ಫಲಿತಾಂಶದ ಪ್ರಕಾರ ಕೊಡಗಿನಲ್ಲಿ ನಮ್ಮ ಪಕ್ಷದ ಬಲ ಹೆಚ್ಚಾಗಿದೆ.

**ಕೊ. ಸಂ.:** ನೀವು ರಾಷ್ಟ್ರದಲ್ಲಿ ಆಡಳಿತದಲ್ಲಿರುವ ಪಕ್ಷದ ಜಿಲ್ಲಾ ಅಧ್ಯಕ್ಷರಾದ ಮೇಲೆ ನಿಮ್ಮ ಸಾಧನೆ ಹಾಗೂ ಉದ್ದೇಶಗಳೇನು?

ಉ. : ನಾನು 1981ರಲ್ಲಿ ಜಿಲ್ಲೆಯ ಸಕ್ರಿಯ ಕಾರ್ಯಕರ್ತನಾಗಿ 1983ರಲ್ಲಿ ಕರ್ನಾಟಕ ರಾಜ್ಯದ ಯುವ ಮೋರ್ಚಾ ಉಪಾಧ್ಯಕ್ಷನಾಗಿ, 1986ರಲ್ಲಿ ಮಡಿಕೇರಿ ತಾಲ್ಲೂಕು ಅಧ್ಯಕ್ಷನಾಗಿ, 1990ರಲ್ಲಿ ಪ್ರಧಾನ ಕಾರ್ಯದರ್ಶಿಯಾಗಿ, ಇದೀಗ ಎರಡನೇ ಬಾರಿಗೆ ಕೊಡಗು ಜಿಲ್ಲಾ ಬಿಜೆಪಿ ಅಧ್ಯಕ್ಷನಾಗಿ ಪಕ್ಷದ ಸಂಘಟನೆಯಲ್ಲಿ ತೊಡಗಿಸಿಕೊಂಡಿದ್ದೇನೆ. ಈ ಅವಧಿಯಲ್ಲಿ ಸ್ಥಳೀಯ ಸಮಸ್ಯೆಗಳಿಗೆ ಸ್ಪಂದಿಸಿದ್ದಲ್ಲದೆ, ಕುಗ್ರಾಮಗಳ ಅಭಿವೃದ್ಧಿಗೆ ಶಕ್ತಿಮೀರಿ ಶ್ರಮಿಸಿದ್ದೇನೆ. ಕೇಂದ್ರ ಸರಕಾರದಿಂದ ಹಲವು ಅನುದಾನಗಳನ್ನು ನೀಡಿಸುವಲ್ಲಿ ಪ್ರಮುಖ ಪಾತ್ರ ವಹಿಸಿದ್ದೇನೆ. ಹಮ್ಮಿಯಾಲ-ಮುಟ್ಲು ರಸ್ತೆಗೆ 10 ಲಕ್ಷ ರೂಪಾಯಿಗಳನ್ನು ಮಂಜೂರು ಮಾಡಿಸಿದ್ದೇನೆ. ಮದೆನಾಡು, ಬೆಟ್ಟತ್ತೂರು, ಚೇರಂಬಾಣೆ ರಸ್ತೆ, ಮೇಕೇರಿ, ಕುಂಬಳದಾಳು ರಸ್ತೆ, ಕಕ್ಕಬ್ಬೆ, ಚೇಲಾವರ, ರಸ್ತೆಗಳ ಅಭಿವೃದ್ಧಿಗಾಗಿ ಕೇಂದ್ರದ ನೆರವು ನೀಡುವ ಉದ್ದೇಶವನ್ನು ಇಟ್ಟುಕೊಂಡಿದ್ದೇನೆ. ಅಷ್ಟೇ ಅಲ್ಲ ನಾನು ರಾಜ್ಯ ದೂರವಾಣಿ ಸಲಹಾ ಸಮಿತಿಯ ಸದಸ್ಯನಾಗಿದ್ದಾಗ ಹಲವಾರು ಕುಗ್ರಾಮಗಳಿಗೆ ಸೌಲಭ್ಯ ಒದಗಿಸುವ ಪ್ರಯತ್ನ ಮಾಡಿದ್ದೇನೆ.

**ಕೊ. ಸಂ. :** ಕಳೆದ ವಿಧಾನ ಸಭಾ ಚುನಾವಣೆಯಲ್ಲಿ ಮಡಿಕೇರಿ ಕ್ಷೇತ್ರದಿಂದ ಗೌಡ ಪ್ರತಿನಿಧಿತ್ವ ಕಳೆದುಕೊಂಡದ್ದು ಒಂದು ಬಹು ದೊಡ್ಡ ನಷ್ಟವಲ್ಲವೇ?

ಉ. : ಹೌದು. ಆದರೆ ಆ ನಷ್ಟಕ್ಕೆ ಜನಾಂಗದ ಪ್ರಮುಖರೇ ಕಾರಣ. ಕೆಲವರು ಬಹಿರಂಗವಾಗಿ ಜಾತೀಯ ಹೆಸರಿನಲ್ಲಿ ಮತಯಾಚಿಸಿದರು. ಇದರಿಂದ ನನಗೆ ಬರಬಹುದಾಗಿದ್ದ ಅನ್ಯ ಜಾತೀಯ ಮತಗಳು ಕೈ ತಪ್ಪಿಹೋಗಿ ಸೋಲಾಯಿತು. ಇನ್ನು ಮುಂದಕ್ಕಾದರೂ ಜನಾಂಗದ ನಾಯಕರು ಯಾವುದೇ ರಾಷ್ಟ್ರೀಯ ಪಕ್ಷದ ಅಭ್ಯರ್ಥಿಯನ್ನು ಬೆಂಬಲಿಸಬೇಕೇ ಹೊರತು ಪಕ್ಷೇತರರನ್ನು ಬೆಂಬಲಿಸಬಾರದೆಂದು ವಿನಂತಿಸಿಕೊಳ್ಳುತ್ತೇನೆ.

---

ಚಿನ್ನದ ಚೂರಿ ಅಂತ ಕುತ್ತಿಗೆ ಕುಯ್ದು ಕೊಳ್ಳಬಹುದೆ

---

**ಕೊ. ಸಂ. :** ಗೌಡ ಸಂಘಟನೆಯಲ್ಲಿ ನಿಮ್ಮ ಪಾತ್ರವೇನು?

**ಉ. :** ಮಡಿಕೇರಿಯಲ್ಲಿ ಗೌಡ ಸಮ್ಮೇಳನ ನಡೆಸಬೇಕೆಂದು, ಅದರ ಪ್ರಧಾನ ಕಾರ್ಯದರ್ಶಿಯನ್ನಾಗಿ ನನ್ನನ್ನು ನೇಮಿಸಿದ್ದರು. ನಾನು ತುಂಬಾ ಉತ್ಸಾಹದಿಂದ ಸಮ್ಮೇಳನ ನಡೆಸಬೇಕೆಂದಿದ್ದೆ. ನಾವು 'ಕೊಡಗು ಗೌಡ ಸಮ್ಮೇಳನ' ನಡೆಸಬೇಕಿತ್ತು. ಅದಕ್ಕೆ ಬೇರೆಯವರು ಬರಬಾರದೆಂಬ ನಿರ್ಬಂಧವನ್ನು ಹೇರುವುದು ಅಗತ್ಯವಿರಲಿಲ್ಲ. ಸಾಮಾನ್ಯವಾಗಿ ಬೇರೆಯವರೇನೂ ಬರುತ್ತಿರಲಿಲ್ಲ. ಆದರೆ ದುರಾದೃಷ್ಟವಶಾತ್ ಸಮ್ಮೇಳನ ನಡೆಸಲಾಗಲಿಲ್ಲ. ಇನ್ನು ಮುಂದಕ್ಕಾದರೂ ಸಮ್ಮೇಳನ ನಡೆಸುವಂತಾಗಬೇಂದು ನಾನು ಬಯಸುತ್ತೇನೆ.

**ಕೊ. ಸಂ. :** ಈಗಿರುವ ಗೌಡ ಸಂಸ್ಥೆಗಳ ಬಗ್ಗೆ ನಿಮ್ಮ ಅಭಿಪ್ರಾಯವೇನು?

**ಉ. :** ಈಗಿರುವ ಸಂಸ್ಥೆಗಳು ಉತ್ತಮವಾಗಿ ಕಾರ್ಯ ನಿರ್ವಹಿಸುತ್ತಿವೆ. 'ಕೊಡಗು ಗೌಡ ವಿದ್ಯಾ ಸಂಘ'ದಲ್ಲಿ ಉತ್ಸಾಹಿ ಯುವಕರು ಇದ್ದಾರೆ. ನಾನು ಒಂದು ಪದವಿ ಪೂರ್ವ ವಿದ್ಯಾಲಯ ಸ್ಥಾಪಿಸುವಂತೆ ಸಲಹೆ ನೀಡಿದೆ. ಆದರೆ ಅದರ ಬಗ್ಗೆ ಅವರು ಆಸಕ್ತಿ ತೋರಲಿಲ್ಲ. ಆಸಕ್ತಿ ತೋರಿದರೆ ಕೇಂದ್ರ ಸರಕಾರದಿಂದ ಸಾಕಷ್ಟು ಸಹಾಯವನ್ನು ನಾನು ಕೊಡಿಸಲು ತಯಾರಾಗಿದ್ದೇನೆ. ನಮ್ಮ ಸಂಸ್ಥೆಗಳು ಕೇವಲ ಕಟ್ಟಡಗಳನ್ನು ಕಟ್ಟುವುದು, ಸಮಾರಂಭಗಳಿಗೆ ಬಾಡಿಗೆ ಕೊಟ್ಟು, ಹಣ ಸಂಗ್ರಹಿಸುವುದಷ್ಟೇ ಉದ್ದೇಶವನ್ನಿಟ್ಟು ಕೊಂಡಂತಿದೆ. ಅದು ಬಿಟ್ಟು ಉಚಿತವಾದ ವ್ಯವಸ್ಥೆಯನ್ನೊದಗಿಸಬೇಕು. ಉಚಿತವಾದ ಹಾಸ್ಟೆಲ್ ವ್ಯವಸ್ಥೆಯನ್ನೇರ್ಪಡಿಸಬೇಕು. ಆಗ ಮಾತ್ರ ನಿಜವಾದ ಗೌಡ ಬಡ ಪ್ರತಿಭೆಗಳಿಗೆ ಮೇಲೆ ಬರಲು ಸಾಧ್ಯವಾಗುತ್ತದೆ. ಇದು ಇಂದು ಇತರ ಜನಾಂಗಗಳಲ್ಲಿ ನಡೆಯುತ್ತಿದೆ. ಹಲವರು ಇದರ ಸದುಪಯೋಗ ಪಡೆದುಕೊಂಡು ಉನ್ನತ ಸ್ಥಾನಕ್ಕೇರಿದ್ದಾರೆ. ನಮ್ಮ ಜನಾಂಗದಲ್ಲಿ ಇಂತಹ ಅಮೂಲ್ಯ ಸೇವೆ ಸಲ್ಲಿಸಲು ಯಾರಾದರೂ ಮುಂದೆ ಬಂದರೆ ಕೇಂದ್ರ ಸರ್ಕಾರದಿಂದ ನನ್ನ ಕೈಲಾದಷ್ಟು ಸಹಕಾರ ಮಾಡಿಸಲು ನಾನು ಸಿದ್ಧನಿದ್ದೇನೆ.

**ಕೊ. ಸಂ. :** ಗೌಡ ಜನಾಂಗಕ್ಕೆ ನಿಮ್ಮ ಕರೆಯೇನು?

**ಉ. :** ನಾವು ಇನ್ನೊಬ್ಬರ ಅನುಕರಣೆ ಮಾಡಲು ಹೊರಟಿದ್ದೇವೆ ಇದು ತಪ್ಪು. ವಿವಾಹದಂತಹ ಕಾರ್ಯಕ್ರಮಗಳಿಗೆ ಲಕ್ಷಾಂತರ ಹಣ ವ್ಯಯಿಸಿ ಆಡಂಬರ ತೋರಿಸಲು ಪ್ರಯತ್ನಿಸುತ್ತಿದ್ದೇವೆ ಇದನ್ನು ಬಿಟ್ಟು, ಸರಳತೆಗೆ ಒತ್ತು ನೀಡಬೇಕು. ಯುವಜನತೆ ವಿದ್ಯೆ, ಕ್ರೀಡೆಯ ಕಡೆಗೆ ಗಮನ ನೀಡಿ ಮುಂದೆ ಬರಬೇಕು. ಜನಾಂಗದ ಬಗ್ಗೆ, ಭಾಷೆ ಬಗ್ಗೆ, ಸಂಸ್ಕೃತಿಯ ಬಗ್ಗೆ ಅಭಿಮಾನ ಬೆಳೆಸಿಕೊಳ್ಳಬೇಕು. ಆದರೆ ದುರಭಿಮಾನ ಬಿಡಬೇಕು.

ಮರಗೋಡು ಗ್ರಾಮದ ಪರ್ಚನ ಕಾರ್ಯಪ್ಪನವರ ಕೊನೆಯ ಮಗಳು ಕುಂತಿ ಕುಮಾರಿಯವರನ್ನು ವಿವಾಹವಾಗಿರುವ ಬೋಪಯ್ಯನವರದು ಪ್ರಜ್ಞಾ ಮತ್ತು ಯಶಿಕಾ ಎಂಬೆರಡು ಹೆಣ್ಣು ಮಕ್ಕಳ ಸುಂದರ ಸಣ್ಣ ಸಂಸಾರ. ಕುಂತಿಕುಮಾರಿಯವರೂ ಕೂಡಿಗೆಯ ಕ್ರೀಡಾಶಾಲೆಯಲ್ಲಿ ಮುಖ್ಯೋಪಾಧ್ಯಾಯಿನಿಯಾಗಿ ಸೇವೆಸಲ್ಲಿಸುತ್ತಿದ್ದಾರೆ.

ತಮ್ಮ ವಕೀಲ ವೃತ್ತಿಯ ನಡುವೆ ಬಿಡುವು ಮಾಡಿಕೊಂಡು 'ಸಂಗಾತಿ'ಯೊಡನೆ ಮಾತನಾಡಿದ ಕೊಂಬಾರನ ಬೋಪಯ್ಯನವರ ಮನದಲ್ಲಿ ಗೌಡ ಜನಾಂಗವನ್ನು ಮೇಲೆತ್ತುವ ಪ್ರಾಮಾಣಿಕ ಕಳಕಳಿಯಿತ್ತು. ಆಗಿನ ಕಾಲದಲ್ಲೇ ಬಿ.ಎಸ್ಸಿ. ಪದವಿಯಲ್ಲಿ 79% ರಷ್ಟು ಅಂಕಪಡೆದಿದ್ದ, ಕಾನೂನು ಪದವಿಯಲ್ಲಿ ಮೂರು ಪದಕಗಳನ್ನು ಗಳಿಸಿದ್ದ ತನಗೆ ಉತ್ತಮ ಅವಕಾಶ, ಪ್ರೋತ್ಸಾಹ ದೊರೆತಿದ್ದರೆ ಎಲ್ಲೋ ಇರುತ್ತಿದ್ದೆ ಎನ್ನುವ ಅವರ ಮಾತಿನ ಹಿಂದೆ ಅರಳುವ ಪ್ರತಿಭೆಗಳಿಗೆ ನೀರೆರೆಯುವ ಭಾವನೆಯಿತ್ತು. ಗೌಡ ಜನಾಂಗ ಸಾಕಷ್ಟು ಹಿಂದುಳಿದಿದೆ. ಸರಕಾರದಿಂದ ಮೀಸಲಾತಿಯ ಸೌಲಭ್ಯಕ್ಕಾಗಿ ಗೌಡ ಜನಾಂಗ ಹೋರಾಟಕ್ಕಿಳಿಯುವ ಚಿಂತನೆ ನಡೆಸುತ್ತಿದೆ ಎಂದು ಸಂಗಾತಿ ಅವರ ಗಮನ ಸೆಳೆದಾಗ, ಕೇಂದ್ರ ಸರಕಾರದ ಮೇಲೆ ಯಾವುದೇ ಒತ್ತಡ ತರಲು ತಾನು ಸಿದ್ಧನಿರುವುದಾಗಿ ಭರವಸೆ ನೀಡಿದರು. ಶ್ರೀ ಬೋಪಯ್ಯನವರು ರಾಜಕೀಯ ರಂಗದಲ್ಲಿ ಇನ್ನು ಎತ್ತರಕ್ಕೇರಲಿ, ಎತ್ತರಕ್ಕೇರಿದಂತೆಲ್ಲಾ ರಸಾತಳದಲ್ಲಿರುವ ಗೌಡಜನಾಂಗವನ್ನು ಮೇಲೆತ್ತಲು ಪ್ರಯತ್ನಿಸಲೆಂಬುದೇ ಸಂಗಾತಿಯ ಶುಭ ಹಾರೈಕೆಯಾಗಿದೆ.

**- ಪಟ್ಟಡ ಶಿವಕುಮಾರ್, ಉಪನ್ಯಾಸಕ**

---

## ಬದುಕೆಂದರೆ ಹೀಗೆ......

ಬದುಕೆಂದರೆ....
ಉದ್ದುದ್ದಕ್ಕೆ ಮೈ ಚಾಚಿಮಲಗಿರುವ ರಸ್ತೆಯ ಮೇಲೆ
ಇಣುಕು ಹಾಕುವ ಹೊಂಡಗುಂಡಿಗಳ ಹಾಗೆ
ಶುಭ್ರಾಗಸದಲ್ಲಿ ಆರ್ಭಟಿಸುವ ಗುಡುಗು ಸಿಡಿಲಿನ ಹಾಗೆ
ನಟ್ಟಿರುಳಲ್ಲಿ ಹೊದಿಕೆ ಹೊಕ್ಕಿ ಮುತ್ತಿಕ್ಕುವ ತಣ್ಣನೆ
ಚಳಿಯ ಹಾಗೆ
ಮರುಭೂಮಿಯಲ್ಲಿ ಅಲ್ಲೊಮ್ಮೆ ಇಲ್ಲೊಮ್ಮೆ ಕಾಣಸಿಗುವ
ಓಯಸಿಸ್‌ನ ಹಾಗೆ....

ಬದುಕೆಂದರೆ....
ಶಾಂತ ಪೃಥ್ವಿಯ ಗರ್ಭದಲ್ಲಿ ಅಡಗಿರುವ
ಭೂಕಂಪನದ ಹಾಗೆ
ಶ್ವೇತ ವರ್ಣದ ಮಂಜುಗಡ್ಡೆಯ ಹಾಗೆ
ಸೂರ್ಯ ಕಿರಣಕೆ ಹಾತೊರೆಯುವ ನೈದಿಲೆಯ ಹಾಗೆ

ಬದುಕೆಂದರೆ....
ಹಾಂ ಬೆಳದಿಂಗಳ ನಿಶೆಯ ಹಾಗೆ
ನೀರ ಮೇಲಣ ನರ್ತಿಸಿ ಮಾಯವಾಗುವ
ನೀರ್ಗುಳ್ಳೆಯ ಹಾಗೆ
ಕಡಲ ತೀರದ ಚಿಪ್ಪೊಳಗೆ ಅಡಗಿರುವ ಮುತ್ತಿನ ಹಾಗೆ

ಬದುಕೆಂದರೆ....
ಹಾಗೆ ಹೀಗೆ..... ಅವರಿವರು ಕಂಡುಕೊಂಡ ಹಾಗೆ
ಅವರಿವರು ಹೊಂದಿಕೊಂಡ ಹಾಗೆ

**- ಸ್ಮಿತಾ ಅಮೃತರಾಜ್, ಕುಯಂತೋಡುಮನೆ, ಸಂಪಾಜೆ**

---

# ಧರ್ಮ ಮತ್ತು ಸಮಾಜ

ಪ್ರತಿಯೊಂದು ಧರ್ಮಗಳಿಗೆ ಅವುಗಳದೇ ಆದ ಸಂಸ್ಕೃತಿ, ಧಾರ್ಮಿಕ ಸಂಪ್ರದಾಯಗಳು ಮತ್ತು ಮತೀಯ ಸಂಸ್ಕಾರಗಳಿರುತ್ತವೆ. ನಾವು ನಮ್ಮ ಹಿಂದೂ ಧರ್ಮದ ಅಡಿಯಲ್ಲಿ ಅದರ ಸಂಸ್ಕೃತಿಯನ್ನು ಇತಿಹಾಸದ ಪುಟಗಳಿಂದ ತಿರುವಿ ಹಾಕಿ ಆಲೋಚಿಸಿದರೆ ಐದು ಸಾವಿರ ವರ್ಷಗಳ ಹಿಂದೆ ಇದರೊಂದಿಗಿದ್ದ ಈಜಿಪ್ಶಿಯನ್ ಮತ್ತು ಬ್ಯಾಬಿಲೋಲಿಯನ್ ಸಂಸ್ಕೃತಿಗಳು ಕಾಲಗತಿಯಲ್ಲಿ ಮುಳುಗಿ ಹೋದರೂ ಹಿಂದೂ ಸಂಸ್ಕೃತಿ ಇಂದಿಗೂ ಬದುಕಿ ಉಳಿದಿದೆ ಎಂಬುದು ಆಶ್ಚರ್ಯ ಪಡುವ ವಿಷಯ. ಇಂದಿಗೂ ವೈವಿಧ್ಯದಲ್ಲಿ ಏಕತೆಯನ್ನು ಪ್ರತಿಪಾದಿಸುವ ಏಕಂಸದ್ ವಿಪ್ರಾಃ ಬಹುದಾವಂತಿ ಮತ್ತು ಸರ್ವದೇವನ ನಮಸ್ಕಾರಃ ಕೇಶವಂ ಪ್ರತಿಗಚ್ಛತಿ ಎಂಬ ವಿಶಾಲ ಮನೋಭಾವವುಳ್ಳ ಹಿಂದೂ ಸಂಸ್ಕೃತಿಯ ಅನುಯಾಯಿಗಳು ಏಷ್ಯಾ, ಆಫ್ರಿಕಾ ಮತ್ತು ಅಮೇರಿಕಾದಲ್ಲಿ ವಿಶ್ವದ ಜನಸಂಖ್ಯೆಯ ಅರ್ಧದಷ್ಟು ಉಳಿದಿದ್ದಾರೆಂದು ಪುರಾಣೇತಿಹಾಸಗಳಿಂದ ತಿಳಿಯುತ್ತದೆ. ವಿಶ್ವವ್ಯಾಪಿ ಹಿಂದೂ ಸಂಸ್ಕೃತಿಯ ಸಂರಕ್ಷಣೆಯ ಆವಶ್ಯಕತೆಯನ್ನು ಡಾ. ಎಸ್. ವೇಣುಗೋಪಾಲಾಚಾರ್ಯ ಅವರ ವಿಶ್ವವ್ಯಾಪೀ ವೈಷ್ಣವಭಕ್ತಿ ಮತ್ತು ಹಿಂದೂ ಸಂಸ್ಕೃತಿಯಲ್ಲಿ ತಮ್ಮ ಚಿಂತನೆಯನ್ನು ವ್ಯಕ್ತಪಡಿಸಿದ್ದಾರೆ. ಭಾರತ ದೇಶದ ಜನತೆಯ ಜೀವನದ ಬಾಹ್ಯ ಸ್ವರೂಪವನ್ನು ಮಾತ್ರ ಅನ್ಯ ರಾಜಕೀಯರ ಆಕ್ರಮಣ ಮತ್ತು ವಿಪ್ಲವಗಳು ಮಾರ್ಪಾಡು ಮಾಡಿವೆ ಹೊರತು ಅಷ್ಟೇನು ಅವರ ಆಚಾರ ವಿಚಾರ ಮತ್ತು ಭಾಷೆಯಲ್ಲಿ ಆಳವಾದ ಬದಲಾವಣೆ ಮಾಡಿಲ್ಲ. ಹಿಂದೂ ನಾಗರೀಕತೆಯು ಇಂದು ನ್ನೆಯದಲ್ಲ. ವೇದಗಳ ಕಾಲದ ಆರ್ಯರ ಆಧ್ಯಾತ್ಮಿಕ ಜೀವನದಿಂದ ಉತ್ತಮಗೊಂಡು ದ್ರಾವಿಡರೇ ಮೊದಲಾದ ಸ್ಥಳೀಯ ಜನತೆಯ ಸಾಮಾಜಿಕ ಜೀವನದ ಅನೇಕ ಅಂಶಗಳನ್ನು ಸ್ವೀಕರಿಸಿ ಬೆಳೆದು ಬಂದಿರುವುದಾಗಿದೆ. ಬಾಳಿನಲ್ಲಿ ಭಿನ್ನತೆಗಳಿದ್ದರೂ ಆರ್ಯರ ಕಾಲದ ಯಜ್ಞಯಾಗಾದಿಗಳ ಸ್ಥಾನದಲ್ಲಿ ಭಕ್ತಿ ಅನುರಕ್ತಿಗಳನ್ನು ಸ್ಥಾಪಿಸಿದೆ. ಅವುಗಳ ಮೂಲಕ ಹೊಸ ಮೌಲ್ಯಗಳನ್ನು ಕಂಡು ಕೊಳ್ಳುತ್ತಾ ಭಾರತ ಒಂದು ಬೆಳಕು ಅಥವಾ ಚೇತನ ಎಂಬ ಅಧ್ಯಾತ್ಮಿಕ ಭಾವನೆಯೊಂದಿಗೆ ಸದಾ ಏಕತೆಯನ್ನು ಉಳಿಸಿಕೊಂಡು ಬಂದಿದೆ.

ಧರ್ಮ ಎಂಬುದು ವ್ಯಕ್ತಿಯ ಬಾಳಿನೊಂದಿಗೆ ಹುಟ್ಟಿ ಬಂದು ಅವನೊಂದಿಗೆ ಬೆಳೆಯಬಲ್ಲ ವಿಚಾರ ಆಕಾಂಕ್ಷೆಗಳನ್ನು ರೂಪಿತಗೊಳ್ಳಲು ಎಲ್ಲಾ ಬುಡಕಟ್ಟಿನ ಜನರೂ ತಮ್ಮ ಪಾಲಿನ ವಿಶಿಷ್ಟ ಕೊಡುಗೆಯನ್ನು ಕೊಟ್ಟಿದ್ದಾರೆ. ಈ ವಿಚಾರವನ್ನು ಗಮನಿಸಿದಾಗ ಹಿಂದೂಧರ್ಮ ಯಾವ ಬುಡಕಟ್ಟಿನ ಆಧಾರದ ಮೇಲೆ ನಿಂತಿಲ್ಲವೆಂದು ದೃಢವಾಗಿ ಹೇಳಬಹುದು. ಹಿಂದೂ ಸಮಾಜದಲ್ಲಿ ಲೋಪದೋಷಗಳಿಗೇನೂ ಕಮ್ಮಿ ಇಲ್ಲ. ಆದರೆ ಅಂತಹ ಲೋಪದೋಷಗಳನ್ನು ಕೊನೆಗಾಣಿಸಿ ಇಂದಿನ ಕಾಲಗತಿಗೆ ಅದು ತನ್ನ ಜೀವನ ಸ್ವರೂಪವನ್ನು ಹೊಂದಿಸಿಕೊಳ್ಳಲು ಸದಾ ಚೇತನ ನೀಡುತ್ತದೆ. ಹಾಗೆ ಮಾಡಬೇಕಾದರೆ ನಾವು ನಮ್ಮಲ್ಲಿ ರಕ್ತಗತವಾಗಿ ಬಂದಿರುವ ನಮ್ಮ ಸಂಸ್ಕೃತಿಯ ಪ್ರೇರಣಾಶಕ್ತಿ ಮತ್ತು ಚೇತನವನ್ನು ಪುನಃ ಪುನಃ ಕಂಡುಕೊಳ್ಳಬೇಕು. ನಮ್ಮ ಬಾಳಿನ ಬಾಹ್ಯಸ್ವರೂಪಗಳು ಬದಲಾವಣೆಗೊಳಗಾಗಬಲ್ಲವು. ಆದರೆ ಬಾಳಿನ ಮೂಲ ಧರ್ಮಗಳೇನೂ ಬದಲಾವಣೆಯಾಗುವುದಿಲ್ಲ. ಮಾನವ ತನ್ನ ಬಾಳಿನ ಪುರುಷಾರ್ಥದತ್ತ ಸಾಗಲು ಪ್ರಯತ್ನಿಸುತ್ತಲೇ ಇರುತ್ತಾನೆ. ಆಧ್ಯಾತ್ಮಿಕ ಮೌಲ್ಯಗಳ ನೆಲೆಯಲ್ಲಿ ಅಪೂರ್ಣತೆಯ ಮೇರೆಯನ್ನು ಮೀರಿ ಪೂರ್ಣಜ್ಞಾನದ ಸ್ಥಿತಿಯನ್ನು ಮುಟ್ಟಿ, ದಿವ್ಯಜ್ಞಾನ ಪ್ರಕಾಶದಲ್ಲಿ ಲೀನಗೊಳ್ಳುವುದರೊಂದಿಗೆ ಮೋಕ್ಷವನ್ನು ಪಡೆಯುತ್ತಾನೆ. ಇದೇ ಬಾಳಿನ ಪರಮಾವಧಿ ಮತ್ತು ಇದನ್ನು ಗಳಿಸಲು ಮಾನವನಿಗಿರುವ ಮಾರ್ಗವೇ ಧರ್ಮ. ಮಾನವ ಸಮಾಜವೆಂಬುದು ಸಾಮಾಜಿಕ ಜೀವನದ ಒಂದು ವ್ಯವಸ್ಥೆ. ಸಾಮಾಜಿಕ ಜೀವನದ ನಿಯಮಗಳನ್ನು ರೂಪಿಸಿ ಪರಿಪಾಲಿಸಿ ಕೊಂಡು ಬರಲು ಶಾಸ್ತ್ರಗಳು ರಕ್ಷಣೆ ನೀಡುತ್ತವೆ. ಭಾರತೀಯ ಇತಿಹಾಸ ಪುಟಗಳ ಅಧ್ಯಯನದಿಂದ ತಿಳಿಯುವುದೇನೆಂದರೆ ರಾಜನ ಪಟ್ಟಾಭಿಷೇಕದ ಸಮಯದಲ್ಲಿ ನಾನು ಧರ್ಮವನ್ನು ರಕ್ಷಿಸುವ ವ್ರತ ತೆಗೆದುಕೊಳ್ಳುತ್ತೇನೆ- ಮಂತ್ರಿ ಪರಿಷತ್ತು ಮತ್ತು ಧರ್ಮಶಾಸ್ತ್ರಗಳ ಆದೇಶದಂತೆಯೇ ನನ್ನ ಕರ್ತವ್ಯವನ್ನು ನಿರ್ವಹಿಸುತ್ತೇನೆಂದು ಪ್ರತಿಜ್ಞೆ ಮಾಡಬೇಕಿತ್ತು. ರಾಜಾಶ್ರಯದಲ್ಲಿ ಧರ್ಮಸಂಸ್ಕೃತಿಗಳ ರಕ್ಷಣೆಗೆ ನಿರಂತರ ಪ್ರಯತ್ನಗಳು ನಡೆಯುತ್ತಿದ್ದವು. ಸತ್ಯ, ದಯ, ದಾನ ಮತ್ತು ಸಂಯಮ ಇವು ಆಯಾ ಧರ್ಮಗಳ ನಾಲ್ಕು ಚರಣಗಳು. ಯಾವ ಧರ್ಮವೂ ಇವುಗಳ ವಿರೋಧ ಬೋಧನೆ ಮಾಡಿಲ್ಲ. ವೈದಿಕ ಯುಗದಲ್ಲಿ ರಾಜರು ಕೇವಲ ಮುಖಂಡರಂತೆ ವೃದ್ಧರ ಮತ್ತು ಶ್ರೇಷ್ಠ ವಿದ್ವಾಂಸರ ಸಲಹೆ ಪಡೆದು ತಮ್ಮ ಶಾಸನ ಕಾರ್ಯ ಮಾಡುತ್ತಿದ್ದರು. ಕಾಲಕ್ರಮದಲ್ಲಿ ರಾಜರ ಪದವಿಯು ವಂಶ ಪರಂಪರೆಯಿಂದ ಸಿಕ್ಕತೊಡಗಿತು. ಭಕ್ತಿ ಪ್ರಚಾರದಲ್ಲಿ ದೇವಾಲಯ ಮತ್ತು ರಾಜಾಶ್ರಯಗಳಿಗೆ ಪ್ರಾಚೀನ ಭಾರತದಲ್ಲಿ ಪ್ರಮುಖ ಪಾತ್ರವಿರುತ್ತಿತ್ತು. ವಿಶ್ವದಲ್ಲೆಲ್ಲಾ ಧರ್ಮಸಂಸ್ಕೃತಿಗಳ ಪರಿಪಾಲನೆಯಲ್ಲಿ ಪ್ರಾಚೀನ ಕಾಲದಿಂದಲೇ ಭಾರತದೇಶದ ಮುಖಂಡರುಗಳು ಅಗ್ರಸ್ಥಾನದಲ್ಲಿದ್ದರು. ದಾನ ಧರ್ಮ ಕಾಣಿಕೆಗಳಿಂದ ಕಲಾಸಂಸ್ಕೃತಿ ಸಹಜೀವನ ಕ್ರಮದ ಪಾಠ ಕಲಿಸಲು ಅನುಕೂಲವಾಗುವಂತೆ ದೇವಾಲಯಗಳನ್ನು ನಿರ್ಮಿಸುತ್ತಿದ್ದರು. ಆದರೆ ಈಗ ನಮ್ಮ ಪ್ರಜಾಪ್ರಭುತ್ವ ಧರ್ಮಶಾಸಕರು ಅವುಗಳನ್ನು ನಿರ್ಲಕ್ಷಿಸಿಕೊಂಡು ಬರುತ್ತಿರುವುದು ಶೋಚನೀಯ. ಪ್ರಾಚೀನ ಕಾಲದಿಂದ ಎಲ್ಲಾ ರಾಜರ ದರ್ಬಾರುಗಳಲ್ಲಿ ಪ್ರತಿದಿನವೂ ಧರ್ಮಶಾಸ್ತ್ರಗಳ ವಿಧಿಗಳಂತೆ ನ್ಯಾಯತೀರ್ಮಾನವಾಗುತ್ತಿತ್ತು. ವಿಶ್ವವ್ಯಾಪೀ ಹಿಂದೂಧರ್ಮವು ಪರಧರ್ಮಸಹಿಷ್ಣುತೆ, ದೀನ ದಲಿತರ ಹಾಗೂ ಹೆಂಗಸರ ಮೇಲೆ ಅನುಕಂಪ ತೋರಿಸುವುದು, ಸತ್ಯಪಾಲನೆಯಲ್ಲಿ ಸಾವಧಾನವಾಗಿರುವುದರಲ್ಲಿ ಅಗ್ರಸ್ಥಾನದಲ್ಲಿತ್ತು.

ಆಧುನಿಕ ಕಾಲದಲ್ಲಿ ಧಾರ್ಮಿಕತೆಯು ಇಳಿಮುಖ

20ನೇ ಪುಟಕ್ಕೆ

# ಫ್ರಿಜ್ ಹೀಗೆ ಜೋಪಾನ ಮಾಡಿ

ಇತ್ತೀಚಿನ ದಿನಗಳಲ್ಲಿ ರೆಫ್ರಿಜರೇಟರ್ ಒಂದು ಅಗತ್ಯ ಸಾಧನವೆನಿಸಿದೆ. ಇಂದಿನ ತುಟ್ಟಿೀ ದಿನಗಳಲ್ಲಿ ಹಣ್ಣು, ತರಕಾರಿ, ಆಹಾರ ಪದಾರ್ಥ, ಹಾಲು, ಮೊಸರು ಇತ್ಯಾದಿ ದಿನಬಳಕೆ ಆಹಾರ ಸಾಮಾಗ್ರಿಗಳನ್ನು ಜೋಪಾನ ಮಾಡಲು ಈ ಪೆಟ್ಟಿಗೆ ಸಹಾಯಕ. ಇದನ್ನು ಮೊದಲ ಸಲ ಕೊಳ್ಳುವಾಗ ಸ್ವಲ್ಪ ದುಬಾರಿ ಎನಿಸಿದರೂ ದಿನ ಕಳೆದಂತೆ ಇದರ ಪ್ರಯೋಜನ ಮನವರಿಕೆಯಾಗುತ್ತದೆ.

ರೆಫ್ರಿಜರೇಟರನ್ನು ನೇರವಾಗಿ ಸೂರ್ಯನ ಕಿರಣಗಳು ಮೇಲೆ ಬೀಳದಂಥ ಜಾಗದಲ್ಲಿ ಇಡಬೇಕು. ಸ್ಟೌವ್‌ಗಳ ಬಳಿ ಇದನ್ನು ಇಡಬಾರದು. ಸೂಕ್ತವಾದ ಹೆವಿ ಡ್ಯೂಟಿ ವಿದ್ಯುತ್ ತಂತಿಗಳಿಂದ ಇದನ್ನು ವಿದ್ಯುತ್ ಮೂಲಕ್ಕೆ ಸಂಪರ್ಕಿಸಬೇಕು. ಮೂರು ಪಿನ್ನುಗಳುಳ್ಳ ಪ್ಲಗ್‌ನ್ನು ಮಾತ್ರ ಬಳಸಬೇಕು.

ಗೋಡೆಯಿಂದ ಪೆಟ್ಟಿಗೆಯು ನಾಲ್ಕು ಅಂಗುಲ ದೂರದಲ್ಲಿರಬೇಕು. ಇದರಿಂದ ತಂಪಾದ ಗಾಳಿ ಪ್ರವಹಿಸಲು ಅನುಕೂಲವಾಗುತ್ತದೆ. ಈ ಸಾಧನವು ತನ್ನ ಹೊಟ್ಟೆ ತುಂಬ ವಸ್ತುಗಳಿದ್ದಾಗ ಹೆಚ್ಚು ಸಮರ್ಪಕವಾಗಿ ಕೆಲಸ ಮಾಡುತ್ತದೆ ಆ ಕಾರಣ ಪೆಟ್ಟಿಗೆಯನ್ನು ಮತ್ತು ಐಸ್‌ಕ್ಯೂಬ್ ಬಾಕ್ಸ್‌ಗಳನ್ನು ಖಾಲಿ ಬಿಡಬೇಡಿ. ವಸ್ತುಗಳನ್ನು ಬಹಳ ಒತ್ತಾಗಿ ಇಡಬೇಡಿ. ಪೆಟ್ಟಿಗೆಯ ಬಾಗಿಲನ್ನು ಪದೇ ಪದೇ ತೆಗೆದು ಹಾಕಿ ಮಾಡುವ ಅಭ್ಯಾಸ ಬೇಡ. ಇದರಿಂದ ವಿದ್ಯುತ್ ಅಪವ್ಯಯವಾಗುತ್ತದೆ. ಪೆಟ್ಟಿಗೆಗೆ ಮೂಲ ವಿದ್ಯುತ್ ಸಂಪರ್ಕವನ್ನು ಯಾವುದೇ ಕಾರಣಕ್ಕೂ ತಪ್ಪಿಸಬೇಡಿ. ಮನೆಯನ್ನು ತಿಂಗಳುಗಟ್ಟಲೆ ಬಿಟ್ಟು ಹೋಗುವ ಸಂದರ್ಭದಲ್ಲಿ ಮಾತ್ರ ವಿದ್ಯುತ್ ಸಂಪರ್ಕ ತಪ್ಪಿಸಿರಿ. ದ್ರವರೂಪದ ವಸ್ತುಗಳನ್ನು ಬಿಗಿಯಾದ ಮುಚ್ಚಳ ಇರುವ ಸೀಸೆಗಳಲ್ಲಿ ಅಥವಾ ಪಾತ್ರೆಗಳಲ್ಲಿ ಇಡಿ. ಬಿಸಿ ಪದಾರ್ಥಗಳನ್ನು ನೇರವಾಗಿ ಪೆಟ್ಟಿಗೆಯಲ್ಲಿಡಬೇಡಿ. ಅವು ಸಾಮಾನ್ಯ ಉಷ್ಣತೆಗೆ ಬಂದ ಮೇಲೆ ಪೆಟ್ಟಿಗೆ ಒಳಗಡೆ ಇಡಿ. ಇದರಿಂದ ಪೆಟ್ಟಿಗೆಗೆ ಕೆಲಸದ ಭಾರ ಕಡಿಮೆಯಾಗುತ್ತದೆ.

ರೆಫ್ರಿಜರೇಟರ್ ಒಳಗೆ ಅತಿ ವಾಸನೆ ಉಳ್ಳ ವಸ್ತುಗಳನ್ನು ಇಡಬಾರದು. ಈರುಳ್ಳಿ, ಬೆಳ್ಳುಳ್ಳಿ, ಇಂಗು ಮುಂತಾದವುಗಳನ್ನು ಇಟ್ಟಲ್ಲಿ ಅವುಗಳ ವಾಸನೆ ಇತರ ವಸ್ತುಗಳಿಗೂ ಹರಡುತ್ತದೆ. ಒಂದು ವೇಳೆ ಅತಿ ವಾಸನೆ ಇರುವ ವಸ್ತುಗಳನ್ನು ಇಡಬೇಕಾದಲ್ಲಿ, ರೆಫ್ರಿಜರೇಟರ್‌ನಲ್ಲಿ ಅಡಿಗೆ ಸೋಡವನ್ನು ಇಟ್ಟಲ್ಲಿ ಅದು ಎಲ್ಲ ತರಹದ ವಾಸನೆಯನ್ನು ಹೀರಿಕೊಳ್ಳುತ್ತದೆ. ಎಲ್ಲಾ ಆಹಾರ ಪದಾರ್ಥಗಳನ್ನು, ತರಕಾರಿಗಳನ್ನು, ಹಣ್ಣು ಹಂಪಲುಗಳನ್ನು ಪ್ಲಾಸ್ಟಿಕ್ ಕವರ್‌ಗಳಲ್ಲಿ ಅಥವಾ ಮುಚ್ಚಿದ ಪಾತ್ರೆಗಳಲ್ಲಿ ಇಡಬೇಕು. ರೆಫ್ರಿಜರೇಟರನ್ನು ಆಗಾಗ ಶುಚಿ ಮಾಡುತ್ತಿರಬೇಕು. ಅದರಲ್ಲಿರುವ ಎಲ್ಲ ವಸ್ತುಗಳನ್ನು ಹೊರತೆಗೆದು ವಿದ್ಯುತ್ ಸಂಪರ್ಕ ನಿಲ್ಲಿಸಿ ಅದರಲ್ಲಿ ಕಟ್ಟಿರುವ ಎಲ್ಲ ಮಂಜುಗಡ್ಡೆ ಕರಗುವಂತೆ ಮಾಡಿ ಶುಚಿಗೊಳಿಸಬೇಕು. ಪೆಟ್ಟಿಗೆಯ ಒಳ ಮೇಲ್ಮೈಯನ್ನು ಅಡಿಗೆ ಸೋಡಾ ದ್ರಾವಣದಲ್ಲಿ ಅದ್ದಿದ ಬಟ್ಟೆಯಿಂದ ಚೆನ್ನಾಗಿ ಒರೆಸಬೇಕು. ಪೆಟ್ಟಿಗೆಯ ಹೊರ ಮೈಯನ್ನು ಶುದ್ಧಿಗೊಳಿಸಲು ಅಮೋನಿಯಾ ದ್ರಾವಣದಲ್ಲಿ ಅದ್ದಿದ ಬಟ್ಟೆಯಿಂದ ಒರೆಸಬೇಕು. ಇದರಿಂದ ಜಿಡ್ಡಿನಿಂದ ಕೂಡಿದ ಕೊಳೆ ನಿವಾರಣೆಯಾಗುತ್ತದೆ. ಪೆಟ್ಟಿಗೆಯಲ್ಲಿ ಜಿರಳೆಗಳು ಸೇರಿಕೊಂಡಿದ್ದಲ್ಲಿ ನುಸಿ ಗುಳಿಗೆಗಳನ್ನು ಇಡಬಾರದು. ಇದಕ್ಕೆ ಬದಲಾಗಿ ಅಕ್ಕಿಹಿಟ್ಟು, ಪುಡಿ ಮಾಡಿದ ಸಕ್ಕರೆ ಮತ್ತು ಬೋರಿಕ್ ಪುಡಿ ಇವುಗಳನ್ನು ಸಮಪ್ರಮಾಣದಲ್ಲಿ ಬೆರಸಿ ಪೆಟ್ಟಿಗೆಯಲ್ಲಿ ಇಡಿ. ಇದರಿಂದ ಜಿರಳೆ ನಿರ್ಮೂಲವಾಗುತ್ತೆ. ಕೆಲವು ಸಲ ಮಂಜುಗಡ್ಡೆಯ ಕ್ಯೂಬ್‌ಗಳನ್ನು ಅದರ ಟ್ರೇಯಿಂದ ಬೇರ್ಪಡಿಸುವುದು ಕಷ್ಟವಾಗುತ್ತದೆ. ಆಗ ಬಿಸಿ ನೀರಿನಲ್ಲಿ ಅದ್ದಿದ ಬಟ್ಟೆಯೊಂದರ ಮೇಲೆ ಐಸ್ ಟ್ರೇಯನ್ನು ಇಟ್ಟಲ್ಲಿ ಐಸ್‌ಕ್ಯೂಬ್‌ಗಳು ಬಹಳ ಸುಲಭವಾಗಿ ಹೊರಬರುತ್ತವೆ. ರೆಫ್ರಿಜರೇಟರ್‌ನಲ್ಲಿ ತರಕಾರಿಗಳನ್ನು ಇಡುವಾಗ ಅವನ್ನು ಬಿಸಿನೀರಿನಲ್ಲಿ ಅದ್ದಿ ನಂತರ ಇಟ್ಟಲ್ಲಿ ಅವುಗಳಲ್ಲಿರುವ ಜೀವಕಣ್ವಗಳು ನಾಶವಾಗಿ ರೆಫ್ರಿಜರೇಟರ್‌ನಲ್ಲಿ ಇಟ್ಟ ಮೇಲೆ ಅವು ಅಭಿವೃದ್ಧಿ ಹೊಂದಿ ತರಕಾರಿ ಹಾಳಾಗುವ ಸಾಧ್ಯತೆ ಇರುವುದಿಲ್ಲ. ಆದಷ್ಟು ಎಳೆಯದಾದ ಮತ್ತು ತಾಜಾ ಸ್ಥಿತಿಯಲ್ಲಿರುವ ತರಕಾರಿಗಳನ್ನು ಪ್ಲಾಸ್ಟಿಕ್ ಕವರ್‌ಗಳಲ್ಲಿಟ್ಟು ರೆಫ್ರಿಜರೇಟರ್‌ನಲ್ಲಿ ಇಡಬೇಕು. ಸಿದ್ಧಪಡಿಸಲ್ಪಟ್ಟ ಆಹಾರ ಪದಾರ್ಥಗಳನ್ನು ಉದಾಹರಣೆಗೆ ಸಾರು, ಸಾಂಬಾರು, ಗೊಜ್ಜು ಮುಂತಾದುವುಗಳನ್ನು ಭದ್ರವಾದ ಮುಚ್ಚಳ ಇರುವ ಪಾತ್ರೆಗಳಲ್ಲಿ ಇಡಬೇಕು.

- ಜಿ. ಅನಂತನಾರಾಯಣ ಸ್ವಾಮಿ

---

## ಹುರುಪು

ಹೊಸ್ತಿಲಲ್ಲಿ ಇರುವ ಹುಲ್ಲು ಕಡ್ಡಿ ನೀನಲ್ಲವೆ?
ಬೆಳಗಾಯಿತೆಂದರೆ ನಿನಗೆಷ್ಟು ಲವಲವಿಕೆ
ನಿನ್ನಲ್ಲಿರುವ ಹೊಳಪು
ನಿನ್ನ ಮಿತ್ರನಾರು
ಉದಯಿಸುತ್ತಿರುವ ರವಿಯೆ
ಮೋಡದ ಮರೆಯಲಿ ತಾನು ಇಣುಕಿ
ಬೆಳ್ಳೊರೆಗಳು ಸೂಸುತ್ತಿವೆ
ಅದೇನೆಂದು ತಿಳಿಯುತ್ತಿಲ್ಲ
ರವಿಯ ಕೆಚ್ಚಲೋ
ಹೊದರಲ್ಲಿಗಾಯಿತು ಬಿಸಿಬಿಸಿ
ಹಾಲುಬೆರೆಸಿದ ಕಾಫಿ
ಬೆಳಗೆದ್ದೊಡನೆ ಕೆಂಪು ಕಿತ್ತಳೆ
ಸೇಬು ನೀನಾಗುವೆ
ಉರಿಯುತ್ತಿದೆ ಕೆಂಡದುಂಡೆ
ಬೆಳಗಿನ ತಿಂಡಿಗಾಗಿ
ಕಾಫಿಯಾದ ನಂತರ
ಸೂಸುತ್ತಿ ನೀ ಹಾಲ್‌ಬೆಳಕು
ನಿನ್ನತ್ತ ಸೆಳೆದ ಕಣ್ಣು
ಕುಕ್ಕುತ್ತೇ ಕುಕ್ಕುತ್ತೇ

- ಎಡಿಕೇರಿ ಗೀತಾಚಂಗಪ್ಪ, ಪಾಲೂರು

---

ಜನಕ್ಕಂಜದಿದ್ದರೂ ಮನಕ್ಕಂಜು (ಸಮಾಜಕ್ಕಂಜಿ ನಡೆಯುವ ಕಾರಣವಿಲ್ಲ ಆದರೆ ಆತ್ಮ ವಂಚನೆಯಿಲ್ಲದೆ ನಡೆದರೆ ಸಾಕು)

# ಜನಾಂಗದ ಹಿತಚಿಂತಕ ನಾಡಿನ ಶ್ರೇಯೋಭಿವೃದ್ಧಿ ಬಯಸಿದ "ದೊಡ್ಡಣ್ಣ" ನೆಂದೆ ಖ್ಯಾತಿಗಳಿಸಿದ ಹಿಂದಿನ ತಲೆಮಾರಿನ ದಿ. ನಂಗಾರು ಅಪ್ಪಣ್ಣ ಸೋಮಪ್ಪ (1901 - 2001)

ನಂಗಾರು ಮೇಲೆ ಮನೆಯಲ್ಲಿ 'ದೊಡ್ಡಣ್ಣ'ನೆಂದೇ ಪರಿಚಿತರಾಗಿದ್ದ, ಕುಟುಂಬದ ಜನಾಂಗದ ಮತ್ತು ನಾಡಿನ ಸರ್ವತೋಮುಖ ಅಭಿವೃದ್ಧಿಗಾಗಿ ಶ್ರಮಿಸಿದ ಶ್ರೀ ನಂಗಾರು ಸೋಮಪ್ಪನವರು. ದಿ. ನಂಗಾರು ಅಪ್ಪಣ್ಣ ಮತ್ತು ದೇವಮ್ಮನವರ ಏಕಮಾತ್ರ ಪುತ್ರರಾಗಿ 1901 ರಲ್ಲಿ ಜನಿಸಿದರು.

ಕಾವೇರಿ ಮಾತೆಯ ಮಡಿಲಾದ ಭಾಗಮಂಡಲ ನಾಡಿನ ಕೋರಂಗಾಲ ಗ್ರಾಮದಲ್ಲಿ ಇವರ ಜನನ. ಇವರ ತಂದೆ ದಿ. ಅಪ್ಪಣ್ಣನವರು ಕೋರಂಗಾಲದಲ್ಲಿ ಕೈಶಾಲೆ ಶಿಕ್ಷಕರಾಗಿದ್ದರು. ಇವರ ತಾಯಿ ದೇವಮ್ಮನವರು ಬೆಟ್ಟಗೇರಿ ಪ್ರಾಥಮಿಕ ಶಾಲೆಯ ಸಂಸ್ಥಾಪಕರಾದ ಪಟ್ಟಡ ಬಿದ್ದಪ್ಪನವರ ತಂಗಿಯಾಗಿದ್ದರು.

ಸೋಮಪ್ಪನವರು ತನ್ನ ಪ್ರಾಥಮಿಕ ಶಿಕ್ಷಣವನ್ನು ಬೆಟ್ಟಗೇರಿ ಶಾಲೆಯಲ್ಲಿ ಪಡೆದು ಮೊಣ್ಣನ ಮಲೆತೋಟದಲ್ಲಿ ವ್ಯವಸ್ಥಾಪಕರಾಗಿ ಕೆಲಸ ಮಾಡುತ್ತಿದ್ದರು. ಮುಂದೆ 1940 ರಲ್ಲಿ ಭಾಗಮಂಡಲವನ್ನು ಬಿಟ್ಟು, ಸೋಮವಾರಪೇಟೆ ನಾಗವಾಲದಲ್ಲಿ ಬಂದು ನೆಲೆಸಿದರು. ಉತ್ತಮ ಕೃಷಿಕರಾಗಿ ನಂಗಾರು ಮೇಲೆ ಮನೆಯ ಉನ್ನತಿಗಾಗಿ ಶ್ರಮಿಸಿದರು. ನಾಗವಾಲದ ದೇವಸ್ಥಾನದ ಜೀರ್ಣೋದ್ಧಾರಕ್ಕಾಗಿ ಹಾಗೂ ಗಣಗೂರು ಶಾಲೆಯ ಅಭಿವೃದ್ಧಿಗಾಗಿ ಶ್ರಮಿಸಿದ ಮಹನೀಯರಿವರು.

ಇವರ ಮಕ್ಕಳಲ್ಲಿ ಒಬ್ಬರಾದ ರಾಮಯ್ಯನವರು ಉತ್ತಮ ಕೃಷಿಕರು ಮತ್ತು ಸಮಾಜ ಸೇವಕರು. ಶ್ರೀ ಚಂಗಪ್ಪನವರು ಮತ್ತು ಪೊನ್ನಪ್ಪನವರು ಕೃಷಿಯಲ್ಲಿ ಅತ್ಯುತ್ತಮ ಸಾಧನೆ ಮಾಡಿದ್ದಾರೆ. ಇವರ ಹಿರಿಯ ಮಗಳು ದಂಬೇಕೋಡಿ ಬೆಳ್ಳಿಯಪ್ಪನವರ ಪತ್ನಿಯವರು ಅಕಾರ ಮರಣಕ್ಕೆ ತುತ್ತಾದರು. ಇನ್ನೋರ್ವ ತಂಗಿ ಪಾರ್ವತಿಯವರು ಶ್ರೀ ಹೊಸೂರು ರಾಮಯ್ಯನವರ ಪತ್ನಿಯಾಗಿದ್ದಾರೆ.

ಸೋಮಪ್ಪನವರಿಗೆ ಮೊಮ್ಮಕ್ಕಳ ಮೇಲೆ ಅಪಾರ ಪ್ರೀತಿ ಮತ್ತು ನಂಬಿಕೆ. ಮೊಮ್ಮಕ್ಕಳನ್ನು ವಿದ್ಯಾಭ್ಯಾಸದತ್ತ ಪ್ರೋತ್ಸಾಹಿಸುತ್ತಾ ತಮ್ಮ ತನು, ಮನ, ಧನಗಳನ್ನು ಅರ್ಪಿಸಿದರು. ಮೊಮ್ಮಕ್ಕಳು ಸರಕಾರದ ಅತ್ಯುನ್ನತ ಸ್ಥಾನವನ್ನು ಪಡೆಯಬೇಕೆನ್ನುವ ಇವರ ಹಂಬಲವು, ಇವರ ದೂರದೃಷ್ಟಿಗೆ ಹಿಡಿದ ಕನ್ನಡಿಯಾಗಿತ್ತು.

ಇವರ ಮೊಮ್ಮಕ್ಕಳಾದ ಶ್ರೀ ನಾಣಯ್ಯನವರು ಅಸಿಸ್ಟೆಂಟ್ ಕಮೀಷನರ್‌ರಾಗಿ ವಾಣಿಜ್ಯ ತೆರಿಗೆ ಇಲಾಖೆ ಬೆಂಗಳೂರಿನಲ್ಲಿಯೂ ಶ್ರೀ ಮೋಹನ್‌ರವರು ಶಾಲಾ ಶಿಕ್ಷಕರಾಗಿ ಮತ್ತು ಶ್ರೀ ನಿಂಗರಾಜುರವರು ಪದವಿಪೂರ್ವ ಕಾಲೇಜು ಯಲಹಂಕದಲ್ಲಿ ಉಪನ್ಯಾಸಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಇನ್ನುಳಿದ ಮೊಮ್ಮಕ್ಕಳು ಮತ್ತು ಮರಿಮಕ್ಕಳು ಹೆಚ್ಚಿನ ವಿದ್ಯಾಭ್ಯಾಸಗಳಲ್ಲಿ ತೊಡಗಿದ್ದಾರೆ.

ಇವರು ಪಾದರಸದಂತೆ ಸದಾ ಚಟುವಟಿಕೆಯುಳ್ಳ ಶ್ರಮಜೀವಿಗಳು ಮತ್ತು ಛಲವಂತರಾಗಿದ್ದರು. ತನ್ನ ಅರವತ್ತರ ಇಳಿವಯಸ್ಸಿನಲ್ಲಿಯೂ ದೂರದ ಭಾಗಮಂಡಲ ನಾಡಿನ ಬೆಟ್ಟದ ಮೇಲೆ ಏಲಕ್ಕಿ ಗಿಡಗಳನ್ನು ತಲೆಯ ಮೇಲೆ ಹೊತ್ತೊಯ್ದು ಏಲಕ್ಕಿ ತೋಟವನ್ನು ಅಭಿವೃದ್ಧಿ ಮಾಡಿದ ಹಿರಿಮೆ ಇವರದು. ಇವರ ಇಂತಹ ಹತ್ತು ಹಲವು ಸಾಧನೆಗಳು ಯುವ ಪೀಳಿಗೆಗೆ ಮಾದರಿ ಮತ್ತು ಸ್ಫೂರ್ತಿಯ ನಿರಂತರ ಸೆಲೆಯಾಗಿದೆ.

ವಿದ್ಯೆಯೇ ಅಧಿದೇವತೆ, ಆದರಿಂದಲೇ ಮಾತ್ರ ನಮ್ಮ ಸಮಾಜದ ಸುಧಾರಣೆಯಾಗಬಲ್ಲದೆಂದು ನಂಬಿದ್ದ ಹಿಂದಿನ ತಲೆಮಾರಿನವರಾಗಿ ವಿದ್ಯಾಭ್ಯಾಸಕ್ಕಾಗಿ ಹೆಚ್ಚಿನ ಆದ್ಯತೆ ನೀಡುತ್ತ ಕೈಸಾಲೆಯ (ಕೈಯ್ಯಾಲೆ) ಶಿಕ್ಷಕರಾದ ದಿ. ನಂಗಾರು ಅಪ್ಪಣ್ಣನವರಂತೆಯೂ 1911 ರಲ್ಲಿ ಬೆಟ್ಟಗೇರಿ ಪ್ರಾಥಮಿಕ ಶಾಲೆಯ ಸಂಸ್ಥಾಪಕರಾದ ದಿ. ಪಟ್ಟಡ ಬಿದ್ದಪ್ಪನವರ ಪ್ರೇರಣೆಯಂತೆಯೂ ದಿ. ನಂಗಾರು ರಾಮಯ್ಯನವರು ಶಿಕ್ಷಣಕ್ಕೆ ಹೆಚ್ಚು ಒತ್ತು ನೀಡಿದ್ದರ ಫಲವೇ ಇಂದು ಬೆಂಗಳೂರಿನಲ್ಲಿ ಇಂದಿರಾ ನಗರದಲ್ಲಿ "ಲಿಟ್ಲ್ ಫ್ಲವರ್ಸ್ ಪ್ರಾಥಮಿಕ ಮತ್ತು ಪ್ರೌಢಶಾಲೆ" ಯು ಉದಯವಾಗಲು ಕಾರಣವಾಗಿದೆ.

ಈ ಶಾಲೆಯು ವಿದ್ಯಾರ್ಥಿಗಳ ಸರ್ವತೋಮುಖ ಬೆಳವಣಿಗೆಯನ್ನು ಕೇಂದ್ರವಾಗಿಟ್ಟುಕೊಂಡು, ವಿದ್ಯಾರ್ಥಿಗಳು ಮಾತ್ರವಲ್ಲದೆ ಪೋಷಕರ ಮತ್ತು ಸುತ್ತಮುತ್ತಲಿನ ನಾಗರೀಕ ಬಾಂಧವರೊಂದಿಗೆ ಹಲವು ರೀತಿಯಲ್ಲಿ ಸಹಕರಿಸುತ್ತಾ ಎಲ್ಲರ ಮನ್ನಣೆ ಪಡೆದು ಪ್ರಗತಿಪಥದತ್ತ ಸಾಗುತ್ತಿದೆ.

"ದೊಡ್ಡಣ್ಣ"ನೆಂದೆ ಖ್ಯಾತರಾದ ದಿ. ನಂಗಾರು ಸೋಮಪ್ಪನವರ ಜನ್ಮ ಶತಮಾನೋತ್ಸವದ (30-3-1901 ರಿಂದ 20-11-1975) ಈ ಸಂದರ್ಭದಲ್ಲಿ ಯುವಪೀಳಿಗೆಯವರಾದ ನಾವುಗಳು ದಿವಂಗತರು ನೀಡಿದ ಮಾರ್ಗದರ್ಶನದಲ್ಲಿ ಮುಂದುವರಿಯುತ್ತಾ ಅವರ ಆತ್ಮದ ಇಚ್ಛಾಶಕ್ತಿಯನ್ನು ಪೂರೈಸುವುದು ನಮ್ಮೆಲ್ಲರ ಕರ್ತವ್ಯ ತಾನೆ? ಆಗ ತಾನೆ ಹಿರಿಯಾತ್ಮಕ್ಕೆ ಮೋಕ್ಷದ ಫಲ ದೊರೆಯುವುದು.

ಬರಹ : **ಕಲ್ಲುಮುಟ್ಲು ಬಸಪ್ಪ, ಬೆಂಗಳೂರು.**

---

## ನಗುವಿನ ಅರ್ಥ

ಇನ್ನೊಬ್ಬರನ್ನು ನೋಡಿ ನಗುವವನು - ಗರ್ವಿ
ಇನ್ನೊಬ್ಬರಿಗಾಗಿ ನಗುವವನು - ಅಯೋಗ್ಯ
ಗೆದ್ದರೂ ನಗದವ - ಕರ್ಮಯೋಗಿ
ನಗುತ್ತಲೇ ವಿಜಯ ಸಾಧಿಸುವವನು - ಬುದ್ಧಿವಂತ
ಇನ್ನೊಬ್ಬರನ್ನು ನಗಿಸುವವನು - ವಿದೂಷಕ
ತನ್ನ ಗೆಳತಿಯನ್ನು ನೆನೆದು ನಗುವವನು - ಪ್ರೇಮಿ
ತಾನೇ ನಗುವವನು - ಹುಚ್ಚ
ಮೈಮರೆತು ನಗುವವನು - ರಸಿಕ
ತನ್ನೊಳಗೆ ನಗುವವನು - ಜ್ಞಾನಿ
ಇನ್ನೊಬ್ಬರಿಗೆ ನೋವಾಗುವಂತೆ ನಗುವವನು - ಖಳನಾಯ್ಕ

**ಕೆ. ಪಿ. ನೀರಜ್, ಪುತ್ತೂರು**

# ಗ್ರಾಮೀಣ ರೈತ ಮಹಿಳೆಯ ಸಮಸ್ಯೆ ಮತ್ತು ಪರಿಹಾರ

**(17-7-2001 ರಲ್ಲಿ ಆಕಾಶವಾಣಿ, ಮಡಿಕೇರಿಯಲ್ಲಿ ಪ್ರಸಾರವಾಯಿತು)**

**ಕಮಲಕ್ಕ :** ಏನ್ ಗೌರಿ ಯಾವ ಕಡೆ ಹೊರಟೆ. ಕತ್ತಲಾಗ್ತಾ ಇದೆ ಮಳೆನೂಬರ್‍ತಾ ಇದ್ಯೆಲ್ಲಾ. ತಲೆ ಮೇಲೆ ಅಷ್ಟು ದೊಡ್ಡ ಹೊರೆ ಏನದು?

**ಗೌರಿ:** ನೋಡಕ್ಕಾ, ಮಳೆಗಾಲ ಬಂತಲ್ಲಾ, ಗದ್ದೆ ತೋಟ, ಕೆಲಸ ಅದೂ ಇದೂ ಏನಾದರೊಂದು ಇದ್ದೇ ಇರುತ್ತೆ. ಈ ಹಳ್ಳಿಯ ಕೆಲಸ ಅಂದ್ರೆ ಒಂದು ಗಳಿಗೆ ಪುರುಸೊತ್ತು ಇರುವುದಿಲ್ಲಪ್ಪ, ಉಸ್ ಯಾವಾಗಾದ್ರೂ ಬಿಡುವಾದ್ರೆ ಈ ಕೆಲಸ ಮಾಡುತ್ತೇವೆ.

**ಕಮಲಕ್ಕ :** ಹಾಗೆ ಹೇಳಬ್ಯಾಡ ಗೌರೀ, ಈ ಪಟ್ಟಣದಲ್ಲಿರುವವರಿಗಿಂತ ಹಳ್ಳಿಯಲ್ಲಿರುವವರೇ ವಾಸೀಂತ ನನ್ನ ಅಭಿಪ್ರಾಯ. ನೀವೆಲ್ಲಾ ತಿಳ್ಕೊಂಡ ಹಾಗೆ ಪಟ್ಟಣದಲ್ಲೂ ಕಷ್ಟ ಇಲ್ಲಾಂತ ಇಲ್ಲ. ಅದ್ಸರೀ.... ಇಷ್ಟೊಂದು ಕುಕ್ಕೆಗಳನ್ನು ಹೊತ್ತು ಕೊಂಡಿದ್ದೀಯಲ್ಲಾ. ನಿನ್ನ ಹೊರೆಯನ್ನು ಆ ಕಲ್ಲಿನ ಮೇಲಿಡು. ಸ್ವಲ್ಪ ಹೊತ್ತು ಕೂತು ಮಾತನಾಡೋಣ. ಬಸ್ಸು ಬರಲು ಇನ್ನೂ ಇಪ್ಪತ್ತು ನಿಮಿಷ ಇದೆ. ಅಲ್ಲಾ..... ನೀನು ಅಷ್ಟೊಂದು ಕುಕ್ಕೆಗಳನ್ನು ತಕ್ಕೊಂಡು ಎಲ್ಲಿಗೆ ಹೊರಟಿದ್ದೀಯಾ? ಹೇಳು ಪರವಾಗಿಲ್ಲ. ಎಲ್ಲರಿಗೂ ಕಷ್ಟ ಇದ್ದದ್ದೇ...... ಸಂಕೋಚ ಯಾಕೆ? ನಿನ್ನ ಕೆಲಸ ಮಾಡುವುದಕ್ಕೆ ನಿನಗ್ಯಾಕೆ ಸಂಕೋಚ?

**ಗೌರಿ :** ನೋಡು ಕಮಲಕ್ಕಾ ನೀನಾದರೆ ಸರಕಾರಿ ಉದ್ಯೋಗದಲ್ಲಿದ್ದೀಯಾ. ನಾವಿಬ್ಬರೂ ಜೊತೆಯಲ್ಲೇ ಓದ್ತಾ ಇದ್ದರೂ ನೀನು ಪಟ್ಟಣ ಸೇರಿದೆ. ನಾನು ರೈತನ ಮಡದಿಯಾದೆ. ಈಗ ಖರ್ಚಿಗೆ ಹಣ ಬೇಕಲ್ಲಾ, ಏನು ಮಾಡುವುದು ಹೇಳು ಇದು ನಮ್ಮ ಮಾವನವರು ಬೆತ್ತದಿಂದ ನೆಯ್ದ ಕುಕ್ಕೆ. ಅವರು ಬೆತ್ತದಿಂದ ಇನ್ನೂ ಹಲವು ವಿಧದ ವಸ್ತುಗಳನ್ನು ನೆಯ್ಯುತ್ತಾರೆ. ವ್ಯವಸಾಯಕ್ಕೆ ಸಂಬಂಧಿಸಿದ ಎಲ್ಲಾ ವಸ್ತುಗಳನ್ನು ತಯಾರಿಸಲು ಕಲಿತಿದ್ದಾರೆ. ಹೀಗಾಗಿ ನಾವು ಮಾರುಕಟ್ಟೆಯಿಂದ ಯಾವ ವಸ್ತುವನ್ನೂ ತರುವುದಿಲ್ಲ. ಅವರು ನೆಯ್ದ ಕುಕ್ಕೆಗಳು ನೋಡಲು ಅಂದವಾಗಿದ್ದು ಕೆಲವು ವರ್ಷ ಬಾಳಿಕೆ ಬರುತ್ತದೆ. ಹೀಗೆ ಆಚೆ ಕರೆ ಮನೆಯವನು ಗೊಬ್ಬರ ಹೊರಲು ಕುಕ್ಕೆ ಬೇಕು. ತಗೊಂಡು ಬಾ ಅಂದ್ರು ಅದಕ್ಕೆ ಇಷ್ಟೊತ್ತಿಗೆ ಹೊರಟೆ.

**ಕಮಲಕ್ಕ :** ತುಂಬಾ ಚೆನ್ನಾಗಿ ನೆಯ್ದಿದ್ದಾರೆ. ಈಗ ಈ ತರ ಕೆಲಸ ಕಲಿತವರೇ ಅಪರೂಪ. ಎಲ್ರೂ ಮಾರುಕಟ್ಟೆಯಿಂದ ಒಂದಕ್ಕೆ ಎರಡು ಬೆಲೆ ಕೊಟ್ಟು, ತರುತ್ತಾರೆ. ಇಂತಹ ಗುಡಿ ಕೈಗಾರಿಕೆಗಳನ್ನು ಗೊತ್ತಿರುವವರಿಂದ ಕಲಿತು ತಮ್ಮ ಮನೆಕೆಲಸಕ್ಕೆ ಉಪಯೋಗಿಸಿಕೊಂಡು ಬೇರೆಯವರಿಗೆ ಮಾರಾಟ ಮಾಡಿದರೆ ಹಣವೂ ಉಳಿಯುತ್ತೆ. ಹಾಗೆ ನಮ್ಮ ಹಿಂದಿನ ಜನಪದ ಕಲೆಯೂ ಉಳಿಯುತ್ತೆ ಅಲ್ಲಾ ಗೌರಿ?....... ಉದಾ : ವ್ಯವಸಾಯಕ್ಕೆ ಸಂಬಂಧಿಸಿದಂತೆ ಮಳೆಗಾಲಕ್ಕೆ ಬೇಕಾದ ಗೊರಗ, ಬರುಂಜಿ, ಏಲಕ್ಕಿ ಕುಯ್ಯಲು ಬುಟ್ಟಿ, ಕಾಫಿ ಕುಯ್ಯಲು ಬುಟ್ಟಿ, ಬೆಳೆ ಹೊರೆ ಕಟ್ಟಲು ನಾರಿನಿಂದ ಹಗ್ಗ ತಯಾರಿಸುವುದು ಇದನ್ನೆಲ್ಲಾ ಮನೆಯಲ್ಲೇ ಕುಳಿತು ಮಾಡಿದರೆ ಸಮಯವೂ ಕಳೆಯುತ್ತೆ. ಚಿಕ್ಕಪುಟ್ಟ ಖರ್ಚುಗಳನ್ನೂ ಹೊಂದಿಸಬಹುದು.

**ಗೌರಿ :** ನೀನೇನೊ ಸುಲಭವಾಗಿ ಹೇಳ್ದೆ ಕಮಲಕ್ಕಾ..... ಮಾರಾಟ ಮಾಡಲು ತಲೆಹೊರೆಯಲ್ಲಿ ಹೊರಲು ಸಾಧ್ಯವೆ? ಜೊತೆಗೆ ಕೊಳ್ಳುವವರೂ ಬೇಕಲ್ಲಾ? ಹೀಗೆ ಯಾರಾದರೂ ಕೇಳಿದರೆ ಮಾಡಿಕೊಡುತ್ತಾರಷ್ಟೆ.

**ಕಮಲಕ್ಕ :** ಅದಕ್ಕೆ ಏನ್ ಮಾಡ್ಬೇಕು ಗೊತ್ತಾ ಗೌರಿ?...... ನಿಮ್ಮ ಊರಿನಲ್ಲಿ ನೀವು ಒಂದಷ್ಟು ಮಹಿಳೆಯರು ಸೇರಿ ಒಂದು ಸಂಘಂತ ಮಾಡ್ಕೊಳ್ಳಿ. ಈಗ ನೋಡು ಸ್ತ್ರೀ ಶಕ್ತಿ, ಸ್ವಸಹಾಯ ಸಂಘದಂತಹ ಇನ್ನೂ ಹಲವಾರು ಯೋಜನೆಗಳನ್ನು ಸರಕಾರ ಜಾರಿಗೆ ತಂದಿದೆ. ಜೊತೆಗೆ ಬ್ಯಾಂಕಿನಿಂದ ನೆರವೂ ಸಿಗುತ್ತದೆ. ಇದೆಲ್ಲಾ ಮಹಿಳೆಯರಿಗೆ ಅದರಲ್ಲೂ ಗ್ರಾಮಾಭಿವೃದ್ಧಿಗಾಗಿಯೇ ಇರುತ್ತದೆ. ನೀವೆಲ್ಲಾ ಸೇರಿ ಸಂಘದ ಮೂಲಕ ನೀವು ಮಾಡಿದಂತಹ ಕುಶಲ ಕಲೆ ಗುಡಿ ಕೈಗಾರಿಕೆ ಅಂತ ಏನಿದೆಯೋ ಆ ವಸ್ತುಗಳನ್ನು ಮಾರಾಟ ಮಾಡಿದರೆ ಒಳ್ಳೆಯದು. ಒಮ್ಮೆ ಒಂದು ಕಡೆ ಉತ್ತಮವಾದ ವಸ್ತುಗಳು ಸಿಕ್ಕುತ್ತವೆ ಎಂದ ಮ್ಯಾಲೆ ಅವಕ್ಕೆ ಬೇಡಿಕೆ ಇದ್ದೇ ಇರುತ್ತದೆ. ಅಲ್ಲವೇ?

**ಗೌರಿ :** ಹೌದಕ್ಕಾ ನೀನು ಹೇಳಿದ್ದು ನಿಜ. ಇತ್ತೀಚೆಗೆ ಮಹಿಳೆಯರು ಕೆಸರು ಗದ್ದೆಯಲ್ಲಿ ಓಟ, ಹಗ್ಗ ಜಗ್ಗಾಟದಂತಹ ಸಾಹಸ ಕೆಲಸ ಮಾಡಿ ಬಹುಮಾನ ಪಡೆದಿದ್ದಾರೆ ನಿನಗೆ ಗೊತ್ತಾ?

ಕಮಲಕ್ಕ : ಹೌದು ಕೇಳಿದ್ದೇನೆ. ಅದು ಮಾತ್ರ ಅಲ್ಲ. ಇನ್ನೂ ಮುಂದೆ ತಿಂಗಳಿಗೊಮ್ಮೆ ಬಿಡುವು ಮಾಡಿಕೊಂಡು ಎಲ್ಲಾ ಮಹಿಳೆಯರೂ ಸೇರಿ ಚರ್ಚಿಸಬೇಕು. ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸಬೇಕು. ಚಿಕ್ಕ ಪುಟ್ಟ ಪ್ರವಾಸಗಳನ್ನು ಕೈಗೊಳ್ಳಬೇಕು. ಹಾಗೆ ನರ್ಸರಿಗಳನ್ನು ಮಾಡಿ ಗಿಡಗಳನ್ನು ಬೆಳೆಸಬಹುದು. ಇದಕ್ಕೆ ಸರಕಾರದಿಂದ ಸಹಾಯ ಧನ ಸಿಗುತ್ತದೆ. ಮನೆ ಮುಂದೆ ಸುಂದರವಾದ ಹೂತೋಟ ಮಾಡಬಹುದು. ಈ ತರ ಕಾರ್ಯಕ್ರಮಗಳನ್ನು ಮಾಡಿಕೊಂಡರೆ ಶರೀರದ ಆಯಾಸ ಪರಿಹಾರವಾಗಿ ಮನರಂಜನೆಯನ್ನೂ ಪಡೆಯಬಹುದಲ್ಲಾ ಗೌರಿ?......

**ಗೌರಿ:** ಹೌದು ನೀನು ಹೇಳುವುದು ನೋಡಿದರೆ ಹಳ್ಳಿಯಲ್ಲಿ ಇನ್ನೂ ಎಷ್ಟೆಷ್ಟೋ ಕೆಲಸ ಮಾಡಬಹುದು. ಈಗ ನೋಡು ಮಳೆಗಾಲ ಬಂತು. ಕಾಚುಂಪುಳಿ ಮಾಡುವ ಸಮಯ. ಅದರಿಂದ ಕೂಡಾ ಒಳ್ಳೆಯ ಆದಾಯ ಇದೆ. ಇದರ ಗಿಡಗಳನ್ನು ಸಹ ನರ್ಸರಿಯಲ್ಲಿ ಬೆಳೆಸುತ್ತಾರೆ. ನಾನು ಎರಡು ಗಿಡ ನೆಟ್ಟಿದ್ದೇನೆ.

**ಕಮಲಕ್ಕ :** ಅಲ್ಲಾ ಗೌರಿ ನೀನು ಕಾಚುಂಪುಳಿ ತೇಳ್ದೆ ನೋಡು. ನೆನಪಾಯ್ತು ನನಗೆ ಒಂದು ಕುಪ್ಪಿ ಹೇಗಾದರೂ ಮಾಡಿ ಕೊಡು ಆಯ್ತಾ?...... ಹೇ ಬಸ್ಸು ಬಂತು ಕಾಣುತ್ತೆ.... ಇನ್ನೊಮ್ಮೆ

**20ನೇ ಪುಟಕ್ಕೆ**



# ಕಲ್ಯಾಣ ಮಂಟಪಗಳ ಅಭಿವೃದ್ಧಿಗೆ ಕೆಲವು ಸಲಹೆ, ಸೂಚನೆಗಳು

ಮಡಿಕೇರಿಯಲ್ಲಿರುವ ಕಲ್ಯಾಣ ಮಂಟಪಗಳಲ್ಲಿ "ಕೆಳಗಿನ ಗೌಡ ಕಲ್ಯಾಣ ಮಂಟಪ" ಭವ್ಯವಾದ ಕಲ್ಯಾಣ ಮಂಟಪವಾಗಿ ಕಂಡು ಬರುತ್ತಿದೆ. ಸಾಕಷ್ಟು ವಿಶಾಲ ವಾಗಿರುವ ಮಂಟಪದಲ್ಲಿ ಕೆಲವು ಸೌಲಭ್ಯಗಳ ಕೊರತೆ ಬಿಟ್ಟು, ಉಳಿದೆಲ್ಲಾ ಸೌಕರ್ಯಗಳು ಇವೆಯಾದರೂ ನಾನು ನೋಡಿರುವ ಕೊರತೆಗಳು ಸಣ್ಣದಾದರೂ ಅವುಗಳು ಮುಖ್ಯವಾದದ್ದು ಎಂದು ನನ್ನ ಅನಿಸಿಕೆ.

ಡಿಶಂಬರು ತಾರೀಖು 9-10, 2000 ಇಸವಿಯಲ್ಲಿ ಗೌಡ ಜನಾಂಗದವರೊಬ್ಬರ ಮದುವೆ ನಡೆಯಿತು. ನಾನು ನೋಡಿರುವ ಈ ಕೆಳಗಿನ ಕುಂದು ಕೊರತೆಗಳನ್ನು ಸರಿಪಡಿಸಬೇಕೆಂದು ನನ್ನ ಕೋರಿಕೆ.

1. ಮಂಟಪದ ಗೋಡೆಯಲ್ಲಿ ದೇವರ ಫೋಟೋ ಇದ್ದದ್ದು ಸರಿ. ತಾರೀಖು 9ರಂದು ರಾತ್ರಿ, ಮದುಮಕ್ಕಳಿಗೆ ಶಾಸ್ತ್ರ ಮಾಡುವ ಸಮಯದಲ್ಲಿ ಹಿರಿಯರೊಬ್ಬರು ನೋಡಿದಾಗ ಆ ಫೋಟೋದ ಕನ್ನಡಿಯಲ್ಲಿ ಅಡ್ಡವಾಗಿ ಬಿರುಕು ಇತ್ತು. ಇದನ್ನು ಹಲವರು ನೋಡಿದರು. ಬೇಸರಪಟ್ಟರು. ಕೆಲವರು ಸಿಟ್ಟಿನಿಂದ ಮಂಟಪದ ಅಧಿಕಾರಿಗಳ ನಿರ್ಲಕ್ಷ್ಯ, ಕರ್ತವ್ಯವನ್ನು ನಿಂದಿಸಿದರು. ಕನ್ನಡಿ ಒಡೆದು ಎಷ್ಟು ದಿನಗಳಾಗಿರಬಹುದು? ಮರುದಿನ ಬೆಳಿಗ್ಗೆ ಈ ವಿಷಯವನ್ನು ಅಲ್ಲಿಯ ಮ್ಯಾನೇಜರ್‌ರವರ ಗಮನಕ್ಕೆ ತಂದು ಆ ಫೋಟೋವನ್ನು ತೆಗೆಯಿಸಬೇಕೆಂದು ನಾನು ಹೋದಾಗ ಅದು ಅಲ್ಲಿರಲಿಲ್ಲ.

**ಸಲಹೆ:** ದೊಡ್ಡದಾದ ಹಲವು ವರ್ಷಗಳು ಬಾಳುವಂತ (ಎಂಬೋಸ್ಡ್ ಮಾಡಿದ) ನಮ್ಮ ಕುಲ ಕುಲದೇವ ಶ್ರೀ ವೆಂಕಟ ರಮಣ ಸ್ವಾಮಿಯ ಫೋಟೋವನ್ನು ಇಡಬೇಕು. ಇದಕ್ಕೆ ಸದಾ ಹಸನಾದ ಹೂ ಮಾಲೆ ಇಡುವ ವ್ಯವಸ್ಥೆ ಸಾಧ್ಯವಾಗದಿದ್ದರೆ, ಕೆಲವು ತಿಂಗಳುಗಳು ನಿಲ್ಲುವಂತ ಗಂಧದ ಹೂಮಾಲೆ ಇಡಬೇಕು.

2. **ಹಸೆ ಬರೆಯುವ ಬೋರ್ಡು:** ದೇವರ ಫೋಟೋದ ಕೆಳಗಡೆ ಗೋಡೆಯಲ್ಲಿ ಸಿಮೆಂಟಿನಿಂದ ಕಪ್ಪು ಬೋರ್ಡು ಒಂದನ್ನು ಮಾಡಬೇಕು. ಅದರಲ್ಲಿ ಪೆಯಿಂಟ್‌ನಿಂದ ಹಸೆ ಬರೆದಿರಬೇಕು. ಒಡ್ಡೋಲಗದ ಚಿತ್ರಗಳನ್ನು ಬರೆಯಬೇಕು. ಮದುಮಗ ಮತ್ತು ಮದುಮಗಳ ಹೆಸರು ಬರೆಯಲು ಸಾಕಷ್ಟು ಸ್ಥಳವಿರಬೇಕು.

ತಾರೀಖು 9-12-2000ರಂದು ಮಧ್ಯಾಹ್ನ 3 ಗಂಟೆಗೆ ನಾನು ಮದುಮಗನ ಕೋಣೆಗೆ ಹೋದಾಗ ಎರಡು ಮಂಟಪಗಳ ಮೇಲೆ ಇಬ್ಬರು ಗಂಡಸರು ಮಲಗಿದ್ದರು. ಮದುವೆ ಜಂಬಾರ ನಡೆಸುವವರು ಬಂದರೆಂದೆ ನಾನು. ಮಲಗಿದವರಿಗೆ ಎಚ್ಚರವಾಗಲಿಲ್ಲ. ಇನ್ನೊಂದು ಸಲ ಹೇಳಿದೆ. ಹಾಸಿಗೆಯ ಮೇಲೆ ಕವಚಿ ಮಲಗಿದ್ದ ಒಬ್ಬರು "ಏಳ್ರ ಓಯಿ" ಎಂದು ಹೇಳುತ್ತಾ ಇಬ್ಬರು ಎದ್ದು ಹೊರಟು ಹೋದರು.

Mattress ಗಲೀಜು ಆಗಿತ್ತು. ಅದಕ್ಕೆ ಹಾಸುವ ಬಟ್ಟೆಗಳಿರಲಿಲ್ಲ. ಹೆಚ್ಚು ಪ್ರಕಾಶವಿಲ್ಲದ ಬಲ್ಬು ಒಂದು ಇತ್ತು. ಮದುಮಗಳ ಮತ್ತು ಊಟದ ಹಾಲ್ ಪಕ್ಕದಲ್ಲಿರುವ ಕೋಣೆಯ ಪರಿಸ್ಥಿತಿಯೂ ಚೆನ್ನಾಗಿಲ್ಲ.

**ಸಲಹೆ:** ಶುಚಿಯಾದ mattress ಮತ್ತು ಹಾಸು ಬಟ್ಟೆಗಳಿರಬೇಕು. Tube lightಗಳನ್ನು ಹಾಕಬೇಕು. ಪ್ರತಿ ಕೋಣೆಗಳ boltಗಳು ಸರಿಯಾಗಿರಬೇಕು.

ತಾ.10-12-2000ರಂದು ಬೆಳಿಗ್ಗೆ 7-30ಕ್ಕೆ ನಾನು ಕಲ್ಯಾಣ ಮಂಟಪ ತಲುಪಿ ಆವರಣದಲ್ಲಿ ನಡೆದಾಡಿದೆ. ಶುಚಿತ್ವ ಸ್ವಲ್ಪ ದೂರದಲ್ಲಿತ್ತು. ಕೆಲವು ಮೆಟ್ಟಿಲುಗಳಲ್ಲಿ ಇಲಿ ಹೆಗ್ಗಣಗಳ ಇಕ್ಕೆ ಇತ್ತು. ತಡವಾಗಿಯಾದರೂ ಗುಡಿಸುವರೆಂದು ಭಾವಿಸಿದೆನು. ಗುಡಿಸಲೇ ಇಲ್ಲ.

ಕಲ್ಯಾಣ ಮಂಟಪ lighting arrangements ಚೆನ್ನಾಗಿತ್ತು. ಮಂಟಪದ ಹಾಲ್‌ನಲ್ಲಿ ಹಾಸಿದ್ದ coir matting ಸರಿ ಇರಲಿಲ್ಲ. ಒಂದು ಕಡೆ ಎರಡು matಗಳನ್ನು ಸೇರಿಸಿದಲ್ಲಿ ಸುಮಾರು 2" ದಪ್ಪ ಇತ್ತು. ತುಂಬಾ ಜನರು ಇದನ್ನು ಎಡವಿದರು. ನಾನು ಸಹ ಎಡವಿದೆ. ಎಪ್ಪತ್ತು ವರ್ಷದ ಗಂಡಸರೊಬ್ಬರು ಎಡವಿ ಬಿದ್ದೇಬಿಟ್ಟರು. ಕಬ್ಬಿಣದ wire ನಿಂದ ಸೇರಿಸಲ್ಪಟ್ಟಿತ್ತು. ನಾನು ಅದನ್ನ ಕಿತ್ತು ತೆಗೆದೆನು. ಕಟ್ಟೆಳಿಗೆ ಮೊಳೆ ಹೊಡೆದು matನ್ನು ಸಿಕ್ಕಿಸಿತ್ತು. ಇದು ಅಪಾಯ. ಬಟ್ಟೆಗಳು ಸಿಕ್ಕಿ ಹರಿಯುವ ತೊಂದರೆ ಇದೆ.

**ಸಲಹೆ:** Coir matting ನ್ನು ಸೇರಿಸಿ ಹೊಲಿಯಬಾರದು. ಹೊಲಿದು ಸೇರಿಸಿದರೂ ಮಟ್ಟದಲ್ಲಿರಬೇಕು. ಪ್ರತ್ಯೇಕ ತುಂಡುಗಳನ್ನು ಜೋಡಿಸಿದರೆ ಸಾಕು. ಕಟ್ಟಳೆಯ ಮೇಲೆ ಇರಬಾರದು.

Matting ಬಾಡಿಗೆಗೆ ತರಿಸಿದ್ದೆಂದು ನಂತರ ನನಗೆ ತಿಳಿಯಿತು. ಮಂಟಪಕ್ಕೆ ಸ್ವಂತವಾಗಿ ಇದ್ದರೆ ಅನುಕೂಲ. ಗಂಡಸರಿಗೆ ಯೂರಿನಲ್ಸ್ ವ್ಯವಸ್ಥೆ ಮಾಡಬೇಕು. ಎರಡು ಯೂರಿನಲ್ಸ್ ಬೇಕು. ಶೌಚಾಲಯದ ಬಲಭಾಗದಲ್ಲಿ ಸ್ಥಳವಿದೆ.

**ಈ ಕೆಳಗಿನ ವ್ಯವಸ್ಥೆಗಳು ಇಲ್ಲದಿದ್ದರೆ ಅವುಗಳನ್ನು ಕೂಡಲೆ ಏರ್ಪಡಿಸಬೇಕು.**

| | | |
|---|---|---|
| 1. | ಮರದ್ದು ಮಣೆಗಳು | 4 |
| 2. | ಮರದ್ದು ಮುಕ್ಕಾಲುಗಳು | 2 |
| 3. | ಸ್ಟೂಲುಗಳು ಮಧ್ಯಮ size ಮದುಮಕ್ಕಳ ಎಣ್ಣೆ ಶಾಸ್ತ್ರಕ್ಕೆ ಕೂರುವುದಕ್ಕೆ ಮರದ್ದು (ಹಸೆಮಣೆ) | 2 |
| 4. | ಚಾಪೆಗಳು | 4 |
| 5. | ಟ್ರೇ Trays | 2 |
| 5(a) | ಹರಿವಾಣ | 2 |
| 6. | ಚೆಂಬುಗಳು | 2 |
| 7. | ಕೊಂಬು ಮಿಳಿಗಳು | 2 |

| | | |
|---|---|---|
| 8. | ಆರತಿ ಮಾಡಲು ಕಂಚಿನ ಬಟ್ಟಲುಗಳು | 12 |
| 8(a) | ಹಸೆ ಬರೆಯಲು(ರೆಕ್ಸಿನ್) ಬಟ್ಟೆ | 1 |
| 9. | ಕಾಸ್ತಾಳಿ | 2 |
| 10. | ಪದಕ | 1 |
| 11. | ಗಟ್ಟಿಬಳೆ | 1 ಜೊತೆ |
| 12. | ಬಿಳಿ ಕೋಟು ಸ್ವಲ್ಪ ದೊಡ್ಡ ಸೈಜ್ | 1 |
| 13. | ರುಮಾಲು | 1 |
| 14. | ಕೆಂಪು ಬಣ್ಣದ ಶಾಲು | 1 |
| 15. | ಬಾಡಿಗೆ ನೀಡಲು ಸಂಪ್ರದಾಯದ ಉಡುಪುಗಳು | 25 |

Sl. No.s 1 ರಿಂದ 8(a) ವರೆಗೆ ಬರೆದಿರುವ ವಸ್ತುಗಳನ್ನು ಆದಷ್ಟು ಬೇಗನೆ ಏರ್ಪಡಿಸಿದರೆ ಅನುಕೂಲ. ಉಳಿದವುಗಳನ್ನು ಅನುಕೂಲವಾದಂತೆ.

ಬೆಲೆಬಾಳುವ ವಸ್ತುಗಳನ್ನು (Sl. No. 9-1) ಬಾಡಿಗೆಗೆ ಕೊಡುವ ವ್ಯವಸ್ಥೆ ಇರಬೇಕು. ಕಲ್ಯಾಣ ಮಂಟಪದಲ್ಲಿ ಕಾರ್ಯ ನಡೆಯಿಸುವವರಿಗೆ ಮಾತ್ರ. ಹೊರಗಡೆಯವರಿಗೆ ಕೊಡಬಾರದು. ಕಲ್ಯಾಣಮಂಟಪಕ್ಕೆ ಸೂಕ್ತವಾದ ಹೆಸರು ಬೋರ್ಡು ಬರೆಯಬೇಕು. ಆಡಳಿತ ಮಂಡಳಿಯವರು ಎಲ್ಲರ ಅನುಕೂಲಕ್ಕಾಗಿ ತಕ್ಕ ವ್ಯವಸ್ಥೆ ಮಾಡಿ ಕೊಡಬೇಕೆಂದು ನನ್ನ ಕೋರಿಕೆ. ಕ್ರಮ ತಪ್ಪಿದರೆ ಯಾವ ಕೆಲಸ ಕಾರ್ಯಗಳು ಸರಿಯಾಗಿ ನಡೆಯುವುದಿಲ್ಲ. ಕನಿಷ್ಠ 10 ಜನರಾದರು ಹಿಂದಿನ ಸಂಪ್ರದಾಯದಂತೆ ಉಡುಪಿನಲ್ಲಿ ರಬೇಕು. ಸಂಪ್ರದಾಯಗಳನ್ನು ಪಾಲಿಸದೆ ಕುಂಬಾರ ಮಾಡುವವರಿಗೆ ಅನುಮತಿಯನ್ನು ಸಮಾಜ ನೀಡಬಾರದು. ಮೇಲ್ವಿಚಾರಣೆ ನೋಡಿಕೊಳ್ಳುವ ಮೇನೇಜರವರಿಗೆ ಹೆಚ್ಚಿನ ಜವಬ್ದಾರಿ ಇರುವುದು ಸಹಜ.

ಈ ಕಲ್ಯಾಣ ಮಂಟಪವು ಕೊಡಗಿನಲ್ಲಿ ಒಂದು ಮಾದರಿ ಕಲ್ಯಾಣ ಮಂಟಪವಾಗಿ ನಡೆಯಲಿ ಎಂದು ದೇವರಲ್ಲಿ ನನ್ನ ಪ್ರಾರ್ಥನೆ

ಕೊನೆಯದಾಗಿ ಎಲ್ಲದಕ್ಕೆ ಮೊದಲು ಶುಚಿತ್ವ ಬಹಳ ಮುಖ್ಯ. ಈ ಮೇಲಿನ ವಿಷಯಗಳು ಹೆಚ್ಚಿನ ಎಲ್ಲಾ ಗೌಡ ಸಮಾಜಗಳಿಗೆ ಅನ್ವಯಿಸುತ್ತದೆ.

ಇನ್ನೂ ಒಂದು ಸೂಚನೆ : ಸ್ಥಳವಿರುವಲ್ಲಿ ಹೂವಿನ ಗಿಡಗಳನ್ನು ನೆಟ್ಟರೆ ಅಂದವಾಗಿ ಕಾಣುತ್ತದೆ. ಕ್ರೋಟನ್ಸ್ (Crotens) ಸುಲಭವಾದ ಮತ್ತು ಹಲವು ವರ್ಷಗಳು ಬಾಳುವಂತ ಬಣ್ಣ ಬಣ್ಣದ ಗಿಡಗಳು.

**- ಪೂಜಾರೀರ ಪೂವಯ್ಯ, ಬೆಂಗಳೂರು**

# ಹುತ್ತರಿ ಹಬ್ಬ

**"ಹುತ್ತೇರಿ ಬಾಕನ ಜೋರಾಗಿ ಬಾತ್**
**ಹುತ್ತೇರಿ ಹೋಕನ ಹೇಳದೇ ಹೋತ್"**

ಹುತ್ತರಿ ಹಬ್ಬ ಕೊಡಗಿನಲ್ಲಿ ಆಚರಿಸುವ ಸಂಭ್ರಮದ ಹಬ್ಬ. ತಮಿಳುನಾಡು, ಕೇರಳದಲ್ಲಿ ಆಚರಿಸುವ ಓಣಂ ಹಬ್ಬದಂತೆ ಕೊಡಗಿನಲ್ಲಿಯೂ ಹೊಸ ಭತ್ತವನ್ನು ಮನೆಗೆ ತೆಗೆದುಕೊಂಡು ಬರುವ ಸಮಯದಲ್ಲಿ ಆಚರಿಸುವ ಹಬ್ಬ. ಈ ಹಬ್ಬವನ್ನು ಆಚರಿಸಿದ ನಂತರವೇ ಬೆಳೆ ಕುಯ್ಲಿಗೆ ಪ್ರಾರಂಭ ಮಾಡಬೇಕೆಂಬ ಪದ್ಧತಿ ಹಿಂದೆ ಇತ್ತು. ಆದರೆ ಈಗ ವಿವಿಧ ರೀತಿಯ ಭತ್ತವನ್ನು ಬೆಳೆಯುವುದರಿಂದ ಕಟ್ಟಳೆಗೆ ಬದ್ಧವಾಗಿರುವುದಿಲ್ಲ. ಹುತ್ತರಿ ಹಬ್ಬದಲ್ಲಿ ಪ್ರತಿಯೊಬ್ಬರೂ ಮನೆಯನ್ನು ಸಾರಿಸಿ ಸುಣ್ಣವನ್ನು ಬಳಿದು ಮನೆಯ ಅಂಗಳ, ಓಡಾಡುವ ದಾರಿ, ಭತ್ತದ ಕಣ ಮುಂತಾದವುಗಳನ್ನು ಶುಚಿಗೊಳಿಸಿ ಅಂಗಳ ಕಣಕ್ಕೆ ಸಗಣಿ ಸಾರಿಸಿ ರಂಗೋಲೆ ಬಳಿದು ಶೃಂಗರಿಸುತ್ತಾರೆ. ಮನೆಯನ್ನು ತಳಿರು ತೋರಣ, ಚೆಂಡು ಹೂವಿನಿಂದ ಅಲಂಕರಿಸುತ್ತಾರೆ. ಆಯಾ ಕುಟುಂಬದ ಐನ್‌ಮನೆಯಲ್ಲಿ (ದೊಡ್ಡ) ಸಾಯಂಕಾಲ ಎಲ್ಲರೂ ಸೇರಿ ಫಲಹಾರವನ್ನು ಮಾಡಿದ ನಂತರ ಕುಂಬಳ, ಆಲದ, ಮಾವಿನ, ಹಲಸಿನ, ಗೇರ ಮರಗಳ ಎಲೆಯನ್ನು ಒಂದರ ಮೇಲೊಂದು ಇಟ್ಟು ಸುರುಳಿ ಮಾಡುತ್ತಾರೆ. ಸುರುಳಿ ಮಾಡುವ ಸಂದರ್ಭದಲ್ಲಿ ಮನೆಯ ಗಂಡಸರೆಲ್ಲಾ ಸೇರಿ 'ಪೊಲಿ ಪೊಲಿಯೇ ಬಾ ಎಂಬುದಾಗಿ ಜೋರಾಗಿ ಕೂಗುತ್ತಾ ನೆರೆ ಕಟ್ಟುತ್ತಾರೆ. ಮಕ್ಕಳು ಪಟಾಕಿ ಹತ್ತಿಸಿ ಆನಂದದಿಂದ ಓಡಾಡುತ್ತಿರುತ್ತಾರೆ. ನಂತರ ಹೊಸ ಬಟ್ಟೆಯನ್ನು ತೊಟ್ಟು ಗ್ರಾಮದವರೆಲ್ಲಾ ಸೇರಿ ಕದಿರು ತೆಗೆದುಕೊಂಡು ಬರುತ್ತಾರೆ. ನಂತರ ಮನೆಯ ಯಜಮಾನನು" ಕದಿರು ಗುತ್ತಿಯನ್ನು ಅಲಂಕರಿಸಿದ ಗುತ್ತಿ ತೆಗೆಯುವುದಕ್ಕೆ ಮೊದಲು ಕುಟುಂಬದ ಅಡಿಗೆಮನೆಯಲ್ಲಿ (ಉಂಬೊಳಗ) ಸೇರಿ ದೇವರನ್ನು ಪ್ರಾರ್ಥಿಸಿ ನೆಲ್ಲಕ್ಕಿಗೆ ಅಕ್ಕಿಹಾಕಿ ಎಲ್ಲರೂ ಯಜಮಾನ ಯಜಮಾನಿಗೆ ಮರ್ಯಾದೆ ಕೊಡುವುದಕ್ಕಾಗಿ ಕಾಲುಮುಟ್ಟಿ ನಮಸ್ಕರಿಸಿ 'ಪೊಲಿ ಪೊಲಿಯೇ ಬಾ ಎಂಬುದಾಗಿ ಜೋರಾಗಿ ಕೂಗುತ್ತಾ ಮನೆಯಿಂದ ಹೊರಡುತ್ತಾರೆ. ಗದ್ದೆಯಲ್ಲಿ ಈ ಸಮಯದಲ್ಲಿ ಭತ್ತ ಕದಿರು ಹೋಗಿರುತ್ತದೆ. ಕದಿರು ಕೊಯ್ಯುವ ಗದ್ದೆಯಲ್ಲಿ ಮನೆಯ ಯಜಮಾನನು ಬೆಳೆಯನ್ನು ಕುಯ್ದು ಕದಿರು ಗುತ್ತಿಯಲ್ಲಿಟ್ಟು ಪೊಲಿ ಪೊಲಿಯೋ ಬಾ ಎಂದು ಎಲ್ಲರೂ ಕೂಗುತ್ತಾರೆ. ಯಜಮಾನನನ್ನು ಬೆಳೆಯನ್ನು ಕುಯ್ಯುವ ಸಮಯದಲ್ಲಿ ಕೋವಿಯಿಂದ ಗುಂಡನ್ನು ಆಕಾಶಕ್ಕೆ ಹೊಡೆಸಿ ಕದಿರನ್ನು ಮನೆಗೆ ತಂದು ಪೂಜೆ ಮಾಡಿ ಅದರ ಅಕ್ಕಿಯನ್ನು ಈಗಾಗಲೇ ತಯಾರಿಸಿದ ಪಾಯಸಕ್ಕೆ ಹಾಕುತ್ತಾರೆ. ಅಟ್ಟಕ್ಕೆ, ದನದ ಕೊಟ್ಟಿಗೆಗೆ ಕಣದ ಗೂಟಕ್ಕೆ, ಕೋವಿ, ಹಣದ ಪೆಟ್ಟಿಗೆಗೆ ಹಾಗೂ ಮುಖ್ಯ ವಸ್ತುಗಳಿಗೆ ಮುಖ್ಯ ಸ್ಥಳಗಳಿಗೆ 'ನೆರೆಯನ್ನು ಕಟ್ಟುತ್ತಾರೆ. ಹುತ್ತರಿ ಕಳೆದ ದಿನದಿಂದ ಮೂರು, ಐದು, ಏಳು ದಿನಗಳಲ್ಲಿ "ಊರೋರ್ಮೆ" ಎಂಬ ಊಟವನ್ನು ಊರಿನವರೆಲ್ಲರು ಸೇರಿ ನೆರವೇರಿಸುವರು.

**- ಗೋವಿಂದಮ್ಮನ ಮೋಹನೇಶ್ ಚಂಗಪ್ಪ, ಸುಂಟಿಕೊಪ್ಪ**

**ಕೋಪಿ ಬಲ್ಲನೇ ದಯಾ– ದಾಕ್ಷಿಣ್ಯವ**

# ಪಳಮೆ : ರಾಂಪಣ್ಣ v/s ಸೋಂಪಣ್ಣ

## ಭಾಗ ಒಂದ್

ನಮ್ಮ ಹಳೆಕಾಲದ ಜೆನ ಮತ್ತೆ ಈಗ ನಮ್ಮ ನಾಡ್‌ಂದ ಹೊರ್ಗೆ ಹೋಗಿ ನೆಲ್ಸಿದವರ ಹತ್ರ ಸುಮಾರ್30, 40 ವರ್ಷಗಳ ಹಿಂದೆ ಅವರ ಮಕ್ಕಳಲ್ಲಿಗೆ ಸಂಬಂಧಿಕರಿಗೆ ಹೋಕನ ಹಿಂಗೆ ನಮ್ಮ ಹಿರಿಯವು ಮಾತಾಡಿಕಂಡ್‌ತ್ತಿದ್ದೊತ್ತೆಳ್ದರ, ಹಂಗನೆ ಹತ್ತ್ ಕುಟುಂಬ ಹದಿನೆಂಟ್ ಗೋತ್ರಕೆ ಸೇರ್ದ ಜನ್ರ ಹಾವಬಾವನ, ನಡ್ಪು ಪದ್ಧತಿಗಳ, ನಮ್ಮವರ ಸ್ವಭಾವಗಳ, ಬಾಸೆ ಮತ್ತೆ ಸಂಸ್ಕೃತಿಗೆ ಸಂಬಂಧಿಸಿದಂಗೆ ಲೋಕಾರೂಡಿಯಾಗಿ ಪಳಮೆ(ಹರಟೆ) ರೂಪಲಿ ಹಲವಾರ್ ಕಂತ್‌ಗಳಲ್ಲಿ ಇನ್ಸ್ ಮುಂದಕೆ ಮೂಡಿ ಬಂದದೆ. ಇದರ ಬರೆವ ಜವಾಬ್ದಾರಿನ ಈಗಾಗಲೇ ಸುರ್‌ಲಿ ಅರೆಗನ್ನಡ ಬಾಸೆಲಿ(ನಡುಗನ್ನಡ ಭಾಷೆ) ನಮ್ಮ ರಾಜು ಮಂಜ್ನಾನ ಕಥೆ ಬರ್ದ ಸಂಕರನ ಬಸಪ್ಪನವು ಬರಿತ ಒಳೊ. ಇವರ ರಾಜು ಮಂಜ್ನಾನ ಕಥೆಗೆ ಬಾರೀ ಕುಷಿಲಿ ನಮ್ಮವು ಪ್ರಶಂಸಿಯೊಳೊ. ಇವರ ಈ ಪಳಮೆ ಜನಕ್ಕೆ ಮಂದಟವಾಗ್‌ವಲ್ಲಿ ಯಶಸ್ವಿ ಕಂಡದೆತ್ತೇಳುವ ಆಶಾಭಾವನೆ ನಮ್ಮದ್ ಇಲ್ಲಿ ಬರುವ ಹೆಸ್ರ್‌ಗ ಕಾಲ್ಪನಿಕವಾಗಿಟ್ಟು.

- ಸಂಪಾದಕಿ

ಕಳ್ದ ತಿಂಗ ಭಾಗಮಂಡಲಲಿ ಜರೋತ ಬೀಳ್‌ತಿದ್ದ ಮಳೆಗಾಲದ ಮಳೆ ಈಗ ಸ್ವಲ್ಪ ಸೊನೆಮಳೆತರ ಆಗಿ ಬೀಳಿಕೆಸುರ್ ಆಗಿತ್. ಹೊಳೆ ನೀರೆಲ್ಲಾ ಇಳ್ದ್ ಈಗ ಸ್ವಲ್ಪ ತಗ್ಗಿಂದ ನೀರ್ ಹೊಳೆ ಒಳಗೆ ಹರೀತಿತ್ತ್. ಆಗಳೆ ಕೆಲವು ಗದ್ದೆಗಳಲಿ ನಾಟಿ ಕರಿ ಹತ್ತಿಕೆ ಸುರು ಆಗುಟ್ಟು. ಈಗ ಮೋಡ ಪಿರ್ಧ್ ದಿನಕ್ಕೆ ನಾಲ್ಕ್ ಗಂಟೆ ಸೂರ್ಯ ಕಾಂಬಂಗೆ ಆಗಿಟ್ಟು.

ಕೊಡ್‌ಗ್‌ಲಿ ಕೆಲವು ಜನ ಕಾವೇರಿ ಹೊಳೆಂದ ಈ ಕಡೆವು ಹನ್ನೆರಡರ ಕೈಲ್‌ಪೋದ್‌ನ ಆಗಲೇ ಮುಗ್ಸಿಬುಟ್ಟಿದ್ದೊ. ನಮ್ಮ ಕುಯ್ಯಂಬಿಡಿ ರಾಂಪಜ್ಜ ಹದಿನೆಂಟರ ಕೈಲ್‌ಮುಹೂರ್ತಕ್ಕೆ ನಾಡ್ ಕಡೆ ಬಾವನ ಮನೆಗೆ ಹೋಗಿ ಬಂದಿದ್ದೊ. ಇನ್ಸ್ ಗದ್ದೆ ಕೆಲ್ಸ ಎಲ್ಲಾ ಕರೆಗಾದ ಮೇಲೆ ರಾಂಪಜ್ಜ ಒಂದೊಪ್ಪ ಬೆಂಗ್ಳೂರಿಗೆ ಹೋಗಿ ಬಾದು ರೂಢಿ. ಅಲ್ಲಿ ದೊಡ್ಡ ಕೆಲ್ಸಲಿರುವ ಇವರ ಮಂಜನ ಹತ್ರಕ್ಕೆ ಹೋಕೆ ಒಂದ್ ದಿನಕ್ಕೆ ಮುಂದೇನೆ ತಯಾರಿ ಈ ಅಜ್ಜಂಗೆ. ಮಂಜಗೋಸ್ಕರ ಬಾಳೆಕಾಯಿ, ಹುಳಿ, ಜೇನ್‌ಕುಪ್ಪಿ, ತರಕಾರಿಗ, ಒಣಗಿಲ್ ಕಂಯಿಃ ಮೀನ್ ಹಿಂಗೆ ಒಂದ್ ಸಣ್ಣ ಲಗ್ಗೇಜ್ ಸಾಮಾನ್‌ಗಳ ಎರಡ್ ಕೈ ಬೇಗ್‌ಲಿ ಕೋಸಿಕಂಡ್ ಬೆಂಗಳೂರಿಗೆ ಹೋಕುತ ಕೆಂಪು ಬಸ್ಸಿಗೆ ಹೊರಟಿದ್ದೊ.

ಆದ್ರೇ ಇವುಕೆ ಮೊದ್ಲೇ ತಣ್ಣೆ ಮಾನಿ ಕುಂದ್ ಕೊಡೀಂದ ನಂಗಾರ್ ಸೊಂಪಜ್ಜತ್ತೇಳವು ಅವರ ಮಗ್ನಿಗೆ ಪಿಳ್ಳಿಕಳಿಗೆ ಕೊಡಿಕೆತ್ತೇಳಿ ಒಂದ್ ಚೀಲ ತುಂಬ ಮನೆಲೆ ಬೆಳ್ದ್‌ದರ ತುಂಬಿಕಂಡ್ ಬಂದ್ ಈ ಕೆಂಪು ಬಸ್ಸ್‌ನ ಮುಂದೆ ಸೀಟ್‌ಲಿ ಕುದ್ದು ಕಂಡಿದ್ದೊ. ಇವ್ರ ಸಂಬಾಸಣೆನ ಮುಂದೆ ಕೇಳಿ.

**ಸೊಂಪಣ್ಣ** : ಓ! ರಾಂಪಣ್ಣಂಗೆ ನಮಸ್ಕಾರ ದೂರ ಹೊರಟಂಗೆ ಕಂಡದೆ? ಬನ್ನಿ ಬನ್ನಿ ಇಲ್ಲೇ ನನ್ನ ಹಕ್ಕಲೇ ಕುದ್ದ್ ಕಣಿ ತಾಹೇಳಿ ತನ್ನ ಪಕ್ಕಕ್ಕೆ ಕರ್ದೊ.

**ರಾಂಪಣ್ಣ** : ಓ!! ನೀವಾ? ನಾನ್ ಹಂಗೇ ನನ್ನ ಬೆಂಗ್ಳೂರ್‌ಲಿ ಇರ್ಪ ಮಂಜ ಗಪ್ಪುನ ಹತ್ರಕೆ ಹೊರಟೊಳೆ ತಾ ಹೇಳಿಕಂಡ್ ಎರಡೂಕೈಲಿ ತೂಗಿಸಿಕಂಡಿದ್ದ ಬಾರೀ ಚೀಲಗಳ ಅಲ್ಲೇ ಸೀಟ್ ಕೆಳಗಿನ ಸಂದಿಲಿ ಜಾಗಮಾಡಿ ತುರ್ಕಿದೊ ಮತ್ತೆ ಕುತ್ತಿಗೆ ಕಾಲರ್ ಹಿಂದೆ ನೇತಾಡಿಸಿಕೊಂಡಿದ್ದ ಕಪ್ಪು ಕೊಡೆನ ತೆಗ್ದ್ ಮೇಲೆ ಸ್ಟ್ಯಾಂಡ್‌ಲಿ ಉದ್ದಕ್ಕೆ ಮಲಗಿಸಿ ಸೊಂಪಜ್ಜ ಹಕ್ಕಲೆ ಕುದ್ದ್ ಕಂಡೊ

**ಸೊಂಪಣ್ಣ** : ಬೊಚ್ಚು ಬಾಯಿ ಬುಟ್ಟ್ ನಗೆ ಆಡಿಕಂಡ್) ನಾನ್ ಬೆಂಗ್ಳೂರಿಗೇ ಹೊರಟದ್ ಬಾವ ನನ್ನ ಮಗ್ಳು ಪಿಳ್ಳಿಕ ಎಲ್ಲಾ ಅಲ್ಲೇ ಒಳೊಲ್ಲಾ? ಈಗ ನೀವು ಜೊತೆಗೆ ಸಿಕ್ಕಿದ್ ನಂಗೆ ತುಂಬಾ ಒಳ್ಳೆದಾತ್. ಇನ್ಸ್ ಇಲ್ಲಿಂದ ಬೆಂಗ್ಳೂರಿಗೆ ಮುಟ್ಟ ಮಾತಾಡಿಕಂಡೇ ಹೋಕಲ್ಲಾ? ತಾ ಹೀಹ್ಹೀ ಹ್ಹೀ ತ ನಗೆ ಆಡ್ದೊ. ರಾಂಪಣ್ಣನೂ ಹ ಹ್ಹಾ ಹ್ಹಾ!! ತ ನಗೆ ಆಡಿಕಂಡೊ.

ಕೆಂಪು ಬಸ್ ಭಾಗಮಂಡಲ ಸಂಗಮದ ಸೇತುವೆ ದಾಟಿಹೊರಡ್‌ಕ್‌ನ ಗಂಟೆ ಒಂಬತ್ ಆಗಿತ್ತ್. ಒಳ್ಳೆ ಹೂವು ಬಿಸಿಲ್ ಬಲಗಡೆಂದ ಬೊಡಿತ್ತಿತ್ತ್. ಈ ಅಜ್ಜಂದಿರ್‌ಗಳಿಗೆ ಮಕ್ಕಳ ಪಿಳ್ಳಿಕಳ ನೋಡುವ ಆಶೆ, ಅಲ್ಲದೆ ಈ ಅಜ್ಜಂದರಿಗೆ ಯವ್ವನಲಿ ದುಡ್ದ್ ಕಷ್ಟ ಪಡ್ಡದರೆಲ್ಲಾ ಈಗ ಈ ಮಕ್ಕಳ ಸುಖ ಸಂತೋಷ ನೋಡಿ ನಮ್ಮ ಕಷ್ಟ ಮರ್ತ್ ಖುಷಿ ಪಡುತಿದ್ದೊ. ತಮ್ಮ ಮಕ್ಕಮರಿಗ ದೊಡ್ಡ ದೊಡ್ಡ ಚಾಕರಿಗೆ ಸೇರಿಕಂಡ್ ಒಳ್ಳೊಳ್ಳೆ ಸೌಕರ್ಯಲಿ ಇರುದರ ಅತ್ತ ಇತ್ತ ಹೇಳಿಕಂಡ್ ಹೊಗಳಿ ಕಂಬೊದರಲ್ಲೇ ಈ ವಯಸ್ಸಾದವು ಆನಂದ ಪಡುತಿದ್ದೊ.

ರಾಂಪಣ್ಣನೂ ಸೊಂಪಣ್ಣನೂ ಪಕ್ಕ ಪಕ್ಕಲೀ ಸ್ವಲ್ಪ ಹೊತ್ ಮೌನಲಿ ಕುದ್ದಿದ್ದೊ. ಕೆಂಪು ಬಸ್ ಭಾಗಮಂಡಲ ಜೇನು ಸೊಸೈಟಿನ ಬುಟ್ಟ್ ದಾಟ್‌ತಿತ್. ಆಗ......

**ಸೊಂಪಣ್ಣ** : ಒಂದ್ ಸಣ್ಣ ಕೆಮ್ಮು ಕೆಮ್ಮಿ ಕಂಡ್ ರಾಂಪಣ್ಣ ನಿಮ್ಮ ಮಂಜ ಬೆಂಗ್ಳೂರಿಲ್ ಎಂತದ್ದ್ ಮಾಡ್ದು? ಎಷ್ಟ್ ವರ್ಷಾತ್ ಅವು ಅಲ್ಲಿಗೆ ಹೋಗಿ? ತಾಕೇಳ್ದೊ.

**ರಾಂಪಣ್ಣ** : (ರಾಂಪಣ್ಣ ಒಂದ್ ತರಾ ಗತ್ತ್‌ಲಿ ನಗೆ ಆಡಿ) ನನ್ನ ಮಂಜ ಗಪ್ಪೂ.....? ಓ!! ಅಂವಂಗೆ ಅಲ್ಲಿ ದೊಡ್ಡ ಚಾಕ್ರಿ ಉಟ್ಟು. ಸರ್ಕಾರದ್ ಚಾಕ್ರಿಗಡ. ಅಂವಂಗೆ ತಿರ್ಗಾಡಿಕೆ ಸರ್ಕಾರದವೇ ಕಾರ್ ಕೊಟ್ಟೊಳೊ. ಆಫೀಸ್‌ಲಿ ಅಂವನ ಕಾಂಬೋಕುತ್ತೇಳಿರೆ ಅಲ್ಲಿ ಹೊರಗಡೆ ಬಾಗ್ಲ್‌ಲಿ ನಿಂತಿದ್ದ ಪಿವ್ನನ್‌ಗೆ ಕಾಸ್ ಕೊಟ್ಟು, ಒಳಗೆ ಹೋಕು. ಜನ ಅಲ್ಲಿ ಸದ್ದ್ ಮಾಡದಂಗೆ ನನ್ನ ಮಂಜನ ಹೋಗಿ ನೋಡಿಕಂಡ್ ಬಂದವೆ ಗೊತ್ತಾತಾ?!!

**ಸೊಂಪಣ್ಣ** : ಓಹೋ, ನಿಮ್ಮ ಮಂಜ ಲಾಯರ್‌ಗಿಂತಲೂ ದೊಡ್ಡ ಆಫೀಸರ್ ಆಗಿರೊಕ್ಕು ಕಂಡದೆ.

**ರಾಂಪಣ್ಣ** : ಹೌದು ಮತ್ತೆ ಅವನ ಎಂತದೆಲ್ಲೋ ಉದ್ದದ ಡಿಗ್ರಿ ತಕಂಬೊಸ್ಟ್, ನಾನು ಓದಿಸಿದಲ್ಲಾ? ಹಂಗಾಗಿ ಅಂವಂಗೆ ದೊಡ್ಡ ಹುದ್ದೆ, ದೊಡ್ಡ ಕೊಂಬರೆ ಒಳಗೆ ದೊಡ್ಡ ಮೇಜ್, ಮತ್ತೆ ದೊಡ್ಡ ಕುರ್ಚಿನ ಹಾಕಿ ಕೊಟ್ಟೋಳೊ. ಹಂಗಾಗಿ ನಿಂಗೆ

---

ವಾದಿಯ ಕೂಡ ವಾದ ಸಲ್ಲ, ಕುಂಟನ ಕೂಡ ದಾರಿ ಸಲ್ಲ

ಹೇಳಿಕೆ ಹೋದ್ರೆ ನನ್ನನೇ ಜನ ಅಂವನ ಹತ್ರಕೆ ಹೋಕೆ ಬುಡ್ದುಲ್ಲೆ? ಗೊತ್ತುಟಾ?

**ಸೊಂಪಣ್ಣ :** ಹೋಗ್ಲಿ ಬುಡಿ ರಾಂಪಣ್ಣ. ಮನೆಲ್ಲಾದ್ರೂ ನಿಮ್ಮ ಮಂಜನ ಹತ್ರ ಮತ್ತೆ ಪಿಳ್ಳೆಕಳ ಹತ್ರ ಹೋಗಿ ಮಾತಾಡಕಲ್ಲಾ? ಇಲ್ಲೇ ಅಲ್ಲಿನೂ ಆ ಪಿವ್ರನ್‌ಗ ತೊಂದ್ರೆ ಕೊಟ್ಟೆವಾ?

**ರಾಂಪಣ್ಣ :** ಛೇ ಛೇ ಹಂಗಿಲ್ಲೆ. ನನ್ನ ಮಂಜ ಮಾತ್ರ ನನ್ನ ಕಂಡ್ರೆ ಬಾಳ ಪ್ರೀತಿ. ಅಂವಂಗೆ ಅಂವನ ಕಾರ್‌ಲೇ ಹೋಮು ಬಾದು ಆದ್ರೂನೂ ನನ್ನ ಹಕ್ಕಲೆ ಒಳ್ಳೆ ಲಾಯಕ್‌ಲಿ ಉಟ್ಟು. ಈ ಗಂಟ್ ಮೂಟೆ ಎಲ್ಲಾ ಎಂತ ಕಷ್ಟ. ನೀನ್ ಹೊತ್ತ ಕಂಡ್ ಬಾದು? ಇದರ ನನ್ನ ಮಕ್ಕ ತಿರ್ಗಿ ಕೂಡಾ ನೋಡ್ದುಲೆ ತಾ ಬೇಜಾರ್ ಮಾಡಿಕಂಡೆದೆ. ನನ್ನ ಸೊಸೆನೂ ಅಷ್ಟೇ.... ಯಾಕೆ ಮಾವ ಇಂತ ತರಕಾರಿಗಳನೆಲ್ಲಾ ಹೊತ್ತ್‌ಕಂಡ್ ಬಂದ್ರೀ? ಇದ್‌ಕ್ಕಿಂತ ಲಾಯಕ್ಕಾದ ಸಾಮಾನ್‌ಗ ಇಲ್ಲೇ ಸಿಕ್ಕಿದಲ್ಲಾತ ಬೇಜಾರ್ ಪಟ್ಟ್‌ಕಂಡದೆ. ಪಾಪ.

**ಸೊಂಪಣ್ಣ :** ಓಹೋ ಅಂದ್ರೆ ನೀವು ಇಲ್ಲಿಂದ ಹೆಗ್ಲ್ ಬೇನೆ ಬರ್‍ಸಿಕಂಡ್ ಹೊತ್ತ್‌ಕಂಡ್ ಹೋದ ತರಕಾರಿ, ಹಣ್ಣ್ ಹಂಪಲ್‌ಗ ಅವುಕೆ ಇಷ್ಟ ಇಲ್ಲೆತ ಆತ್. ಹೋಗ್ಲಿ ಬುಡಿ. ನಿಮ್ಮ ಸೊಸೆ ಮತ್ತು ಪಿಳ್ಳೆಕ ಎಲ್ಲಾ ನಿಮ್ಮ ಹತ್ರ ಪ್ರೀತಿಲಿ ಮಾತಾಡಿವೆ ತಾನೆ. ಪಾಪ ವಯಸ್ಸಾದವು. ದೂರಂದ ಬಂದೊಲೊತ್ತೇಳಿ ಅವು ಆಸೆ ಪಟ್ಟೆವೆ ತಾನೆ ರಾಂಪಣ್ಣ?

**ರಾಂಪಣ್ಣ :** ಅಯ್ಯೋ ಸೊಂಪಣ್ಣ ಅದರೆಂತ ಕೇಳಿರೆ!!! ನಾನ್ ಈ ಲಗ್ಗೇಜ್‌ನ ಹೊತ್ತ್ ಕಂಡ್ ಮನೆ ಒಳಗೆ ಹೋನೆಲ್ಲಾ. ಅಲ್ಲಿ ಮೂಲೆ ಕೊಂಬರೆಲಿ ನಾನೇ ತಕಂಡೋಗಿ ಮಡಗಿಬುಟ್ಟನೆ. ಅಷ್ಟೊತ್ತಿಗೆ ಸೊಸೆ ಬಂದ್ ಮಾತಾಡ್ಸಿದೆ. ಆಮೇಲೆ ಒಂದ್ ಗ್ಲಾಸ್ ತಣ್ಣೀರ್‌ನ ಆ ಪೆಟ್ಟಿಗೆ ಒಳಗೆಂದ ತೆಗ್ದ್ ಕೊಟ್ಟದೆ. ಆಮೇಲೆ ಕಾಲುಕೈ ತೊಳ್ಕಂಡ್ ಬಂದ ಮೇಲೆ ಸೊಸೆ ಊಟ ಕೊಟ್ಟದೆ. ಅದರೊಟ್ಟಿಗೆ ಅರ್ಧ ಪಾವು ಕಳ್ಳ್ ಕೊಟ್ಟದೆ. ನಾನ್ ಅದರ ಕುಡ್ಕಂಡ್ ಇನ್ನ್ ನನ್ನ ಮಂಜ ಬಾಕೆ ಮುಟ್ಟ ಮಕ್ಕಳೊಟ್ಟಿಗೆ ಕುದ್ದ ಕಂಡ್ ಟಿ. ವಿ. ನೋಡಿನೆ.

**ಸೊಂಪಣ್ಣ :** ಹಂಗಲ್ಲ ರಾಂಪಣ್ಣ ನಿಮ್ಮನ ಅವುಕಂಡ ಮೇಲೆ, ಇಲ್ಲಿ ನಮ್ಮ ನಾಡ್‌ಲಿ ಇದ್ದಂಗೆ, ನಾಡ್‌ನ ಪದ್ಧತಿ, ನಾಡ್‌ನ ಪ್ರೀತಿ ಮಾತ್‌ಕತೆ ಎಲ್ಲಾ ನಮ್ಮಂಗೆ ಇದ್ದದಲ್ಲಾ? ಅದ್‌ಕೆ ಕೇಳ್ದೆ ಅಷ್ಟೆ.

**ರಾಂಪಣ್ಣ :** ಓ, ಅದಾ ಬುಡಿ. ಅದ್‌ಕೆಲ್ಲಾ ನಾನ್ ಬೇಜಾರ್‌ಮಾಡಿಕಂಬದಿಲ್ಲ, ನನ್ನ ಸೊಸೆಗೆ ಇಲ್ಲಿ ನಂಗೆ ಹೋದಂಗೆ ಕಾಲ್‌ಕೈ ತೊಳ್ಕಂಬಕೆ ಚೊಂಬೊಲಿ ನೀರ್ ಕೊಡ್ದ, ಆಮೇಲೆ ಕಾಲು ಮುಗಿಯದು, ಮನೆಯವರನೆಲ್ಲಾ ವಿಚಾರ್‍ಸುದು. ಎಲ್ಲಾ ಗೇನ ಬಾದ್ಲೆ ಕಂಡದೆ. ಹಂಗಾಗಿ ಹೋದಂಗೆ ಬಚ್ಚಲು ಮನೆ ಕಡೆ ಕೈ ತೋರ್‍ಸಿವೆ. ಕೈಗೊಂದು ಟವಲು ಕೊಟ್ಟವೆ. ಆಮೇಲೆ ಊಟ ಹಾಕಿವೆ. ಇದರೊಳಗೆ ಕಷ್ಟಸುಖನೆಲ್ಲಾ ಕೇಳಿಕಂಡದೆ. ಊಟ ಆದಂಗೆ ಅವಳಿಗೆ ಸುಸ್ತು ಗಡ. ಬಾಗ್‌ಲ್ ಹಾಕಂಡ್ ಮಲ್ಗಿ ಬುಟ್ಟದೆ. ನಂಗೆ ಹಗಲ್‌ಲ್ ನಿದ್ದೆ ಬಾದುಲ್ಲೆ ನೋಡಿ.

**ಸೊಂಪಣ್ಣ :** ಹೋಗಲಿ ಬುಡಿ ಅವುಕೆ ಏನ್ ಕಷ್ಟ ಇದ್ದೆದೋ ಏನೊ. ಪಾಪ. ಆ ಪಿಳ್ಳೆಕಾ ಎಲ್ಲಾ ನಿಮ್ಮ ಹತ್ರ ತಾತ, ತಾತ ತ್ತೇಳಿಕಂಡ್ ಪ್ರೀತಿಲಿ ಸುತ್ತಾ ಮುತ್ತಾ ಡಿವೆಕಂಡದೆ?

**ರಾಂಪಣ್ಣ :** ಅಯ್ಯೋ ನನ್ನ ಪಿಳ್ಳೆಕಳ ನಾನ್ ಎಷ್ಟ್ ಹೊಗಳಿರೂ ಸಾಲ್ದ್. ಅವು ನನ್ನ ಸುತ್ತಾ ಕುದ್ದು ಕಂಬದು ಇರ್ದು ಹೋಗ್ಲಿ ಅವು ಒಂದು ಮಾತ್, ಗಲಾಟೆನೆ ಮಾಡ್ದುಲ್ಲೆ,... ಹೋಗಲಿ ನಾನ್ ಇಲ್ಲಿಂದ ತಕಂಡ್ ಹೋಗಿದ್ದ ನೆಲ್ಲಾ ಹಣ್ಣ್ ಹಂಪಲ್‌ಗಳ್ನ ಅದಕ್ಕೂ ನಮ್ಮ ಮಕ್ಕಳಂಗೆ ಮೇಲೆ ಬಿದ್ದ್ ಹೋಗಿ ತಿಂಬೊದಿಲ್ಲೆ. ಎಲ್ಲಾ ಬಹಳ ಸಿಸ್ತ್ ಎಷ್ಟ್ ಬೇಕ್ ಅಷ್ಟೇ. ಎಲ್ಲಾ ಹೈಲೆವಲ್ಲೇ ನೋಡಿ. ಅವು ಅವ್ವೇ ಮಾತಾಡಿ ಕಂಬೊದೆಲ್ಲಾ ಬರೀ ಇಂಗ್ಲೀಷ್, ಹಿಂದಿ ಆದುಬುಟ್ರೆ ಕನ್ನಡ, ನನ್ನ ಸೊಸೆನೂ ಅಷ್ಟೆ. ಎಲ್ಲಾ ಅಲ್ಲೇ ಬೆಳ್ದವಲ್ಲಾ. ಹಂಗಾಗಿ ನಮ್ಮ ತಾಯಿಭಾಷೆ ಅವುಕೆ ಬಾದುಲೆ. ನನ್ನ ಮಂಜ ಒಬ್ಬ ಮಾತ್ರೆ ನಮ್ಮ ಭಾಷೆನ ಮರ್ತ್‌ತೆಲ್ಲೇತ!!

**ಸೊಂಪಣ್ಣ :** ನೀವು ಹೇಳ್ದ್ ಸರೀ ಉಟ್ಟಣ್ಣಾ. ನಮ್ಮ ಜನ ಹಿಂಗೆ ಹೋದ ಹೋದ ಕಡೆ ಎಲ್ಲಾ ಆ ಊರ್ ಜನ್ರ ಬಾಷೆಲೇ ಮಾತಾಡ್ದು. ಆ ಊರ್‌ನ ನಡ್‌ಪನೇ ಮಾಡ್ದು. ಹಂಗಾಗಿ ನಮ್ಮ ಗೌಡರ್‌ಗಳ ಭಾಷೆ, ಸಂಸ್ಕೃತಿ, ನಡ್‌ಪ್‌ಗಳ ಎಲ್ಲಾ ಮರ್ತ್‌ಕಂಡೇ ಬುಟ್ಟೋಳ ಕಂಡದೆ. ಹಿಂಗೆ ನಮ್ಮ ಊರ್‌ನ ಜನ ಮರ್ತ್‌ಕಂಡ್ ನಮ್ಮ ನಡುಗನ್ನಡ ಬಾಷೆನ ಜನರಲ್ಲಿ ಜಾಗೃತಿ ಮೂಡಿಸಿಕೆ ಎಷ್ಟೊ ಜನ ಪ್ರಯತ್ನ ಮಾಡ್ತು ಒಳೊ. ನಮ್ಮ ಜನಾಂಗದ ಸಂಗ ಸಂಸ್ಥೆ, ಸಮಾಜಗಳ್ಲಿ ನಮ್ಮ ಆಚಾರ, ವಿಚಾರ, ಅದ್ರಲ್ಲಿ ಒಬ್ಬ ಅಂತೂ ನಮ್ಮ ನಾಡ್‌ನ, ನಮ್ಮ ಗೌಡು ಜನರ ಸಂಸ್ಕೃತಿನ ಉಳ್ಸಿಕೋಸ್ಕರ ಒಂದು ಪತ್ರಿಕಾಲಯನೆ ಸುರು ಮಾಡಿ ಬುಟ್ಟೋಳೊ. ಅದೇ ಅದ್ ಆ" ಕೊಡಗು ಸಂಗಾತಿ ಪತ್ರಿಕೆ" ತ

**ರಾಂಪಣ್ಣ :** ಓಹೋ ಗೊತ್ತಾತ್ ಬುಡಿ ಅದೆ ನಮ್ಮ "ಪಟ್ಟಡ ಪ್ರಭಾಕರ್ ಶೀಲಾಮಣಿ" ಇವು ನಮ್ಮ ಗೌಡ ಸಂಸ್ಕೃತಿ ಅವಸಾನದ ಅಂಚಿನಲ್ಲಿರ್‌ಕನ ಬುಡದಿಂದಲೇ ಎತ್ತಿ ಹಿಡ್ದ್ ನಮ್ಮ ಸಂಸ್ಕೃತಿ ಬಗ್ಗೆ ಎಷ್ಟೆಸ್ಟೋಒಳ್ಳೆ ವಿಚಾರಗಳ ಬರ್ದ್ ನಮ್ಮ ಜನಕ್ಕೆ ತಿಳುವಳಿಕೆ ಕೊಡುತಾ ಒಳೋಲ್ಲಾ? ಅವ್ರುನ ತಾನೆ ನೀವು ಹೇಳ್ದು.

**ಸೊಂಪಣ್ಣ :** ಹೌದು ಹೌದು ಆ ಜನನೆ ಬಗ್ಗೆನೆ ನಾನ್ ಹೇಳಿಕೆ ಹೊರಟದ್. ನಮ್ಮ ಜನ ಮರ್ತ್ ಹೋದ ನಮ್ಮ ಭಾಷೆ ಬಗ್ಗೆ ನಮ್ಮ ನಡ್‌ಪ್, ಆಚಾರ ವಿಚಾರದ ಬಗ್ಗೆ ನಮ್ಮ ನಾಡ್‌ನವಕೂ ಹೊರಗೆ ಹೋಗಿ ಇದ್ದ ಜನಕ್ಕೂ ತಿಳುವಳಿಕೆ ಮಾಡುವಂತಹ ಒಂದ್ ಭಾರೀ ದೊಡ್ಡ ಕೆಲ್ಸನೇ ಪಾಪ ಅವು ಮಾಡುತಾ ಒಳೋ ಅಣ್ಣಾ.

**ರಾಂಪಣ್ಣ :** ಓ ಹೌದು ಗಡ, ನಮ್ಮ ಮನೆವೂ ಅವರ ಕೊಡಗು ಸಂಗಾತಿ ಪತ್ರಿಕೆನ ತರ್‍ಸಿಕಂಡ್ ಓದಿವೆಗಡ, ಅದ್ರಲ್ಲಿ ನಮ್ಮ ನಡ್‌ಪಗಳ, ಹಬ್ಬ ಹರಿದಿನಗಳ ಆಚರಣೆಗಳ ವಿವರಗ, ಸೋಬಾನೆ ಹಾಡ್‌ಗ, ಮದ್ವೆ ಜಂಬಾರಗಳ ಪದ್ದತಿಗಳ, ಹುಟ್ಟ್‌ಕನ ಸಾಯಕನ ಮಾಡ್ವ ಕರ್ಮಗಳ ವಿಚಾರನ, ನಮ್ಮ ಹಳೇ ಪಂಡ್ ಕಾಲದ ಅಜ್ಜಂದಿರ್‌ಗಳ ಪರಿಚಯಗಳ, ಹಿಂಗೆ ಎಷ್ಟೆಸ್ಟೋ ನಂಗೂ

ಗೊತ್ತೇ ಇಲ್ಲದಿದ್ದಂತಹ ಮಾಹಿತಿಗಳ, ವಿವರಗಳೊಟ್ಟಿಗೆ ಬರ್ದ್ ನಮ್ಮ ಜನರ ಮುಂದೆ ಮಡುಗುತಾ ಒಳೋ ಗಡ. ಅಬ್ಬಾ ನಾವು ಹಿಂದೆ ಬಿದ್ದ ಈ ಗೌಡ ಜನಿಕೆ ಇಂವ ಒಬ್ಬನ್ನಾದ್ರೂ ಇಂತಹ ಧೈರ್ಯದ ಕೆಲ್ಸನ ಮಾಡುತಾ ಉಟ್ಟಲ್ಲಾ ಅವರ್ನ ಎಷ್ಟ್ ಹೊಗಳಿರೂ ಸಾಲ್ದ್. ಅಲ್ಲರ ಬಾವ

**ಸೊಂಪಣ್ಣ :** ಅಷ್ಟೇ ಅಲ್ಲ ಆ ಪಟ್ಟಡ ಪ್ರಭಾಕರ್‌ನವು ಇಷ್ಟೊಂದ್ ದೊಡ್ಡ ಕೆಲ್ಸನ ಸುರು ಮಾಡ್‌ಕೆ ಅವು ಸ್ವಂತ ಕರ್ಚ್ ಹಾಕಿ ನಮ್ಮ ಜನಾಂಗದವರ ಏಳಿಗೆಗೋಸ್ಕರ, ನಮ್ಮ ಜನರಲ್ಲಿ ಜಾಗೃತಿ ಮೂಡಿಸಿಕ್ಯೋಸ್ಕರ ಈ ಕಾರ್ಯನ ಸುರು ಮಾಡ್ದವು, ಸುರು ಸುರುಲಿ ನಮ್ಮ ಜನ ಇವುಕೆ ಸಪ್ಪೋರ್ಟ್ ಕೊಡದೆ ಇವರ ಕಾಲ್‌ನ ಎಳ್ದವೇ ಜಾಸ್ತಿ ಗಡ, ಆದ್ರೇ ಈಗ ನೋಡಿ ಇವರ ಪತ್ರಿಕೆ ನಮ್ಮ ನಾಡ್‌ಲೇ ಅಲ್ಲ. ಬೇರೆ ಹೊರ ದೇಶಲಿ ಈಗ ಒಳ್ಳೆ ಹೆಸರು ಮಾಡಿಟ್ಟು, ಗೊತ್ತುಟಾ ನಿಮಿಗೆ?

**ರಾಂಪಣ್ಣ :** ಹೌದು, ಹೌದು ನಾನ್ ಸನ ಕೇಳೊಳೆ. ಈ ಪತ್ರಿಕೆಲಿ ಪೂಜಾರಿ ಮೊಣ್ಣಪ್ಪನವು ಮತ್ತೆ ಪುರುಷೋತ್ತಮ್ ಬಿಳಿಮಲೆ ಇವು, ಬಾರಿಯಂಡ ಜೋಯಪ್ಪ, ಬೈತಡ್ಕ ಜಾನಕಿ, ಚೊಂದಮ್ಮ, ಶಿವಕುಮಾರ್ ಹಿಂಗೆ ತುಂಬಾ ಜನ ನಾವು ಮರ್ತ್ ಹೋಗಿದ್ದಂತ ಎಷ್ಟೆಷ್ಟೊ, ಈ ಕೊಡಗಿನ ಮತ್ತೆ ನಮ್ಮ ಸುಳ್ಯ ಕಡೆಗಳ ಜನರ ಆಚಾರ ವಿಚಾರಗಳ ತಿಳ್ಕಂಡ್ ಬರ್ದ್ ನಮ್ಮ ಗೌಡರುಗಳ ಸ್ಥಾನಮಾನನ ಎತ್ತಿ ಹಿಡಿಯುವ ಕೆಲಸನ ಮಾಡುತಾ ಒಳೋಗಡ. ನಮ್ಮಂತ ಹಳಬರಿಗೇ ಎಷ್ಟೊ ಸಂಗತಿಗ ಗೊತ್ತಿಲ್ಲೆ. ಅಂತದರಲಿ ಇವು ಈ ಪತ್ರಿಕೆ ಮುಖಾಂತರ ನಮ್ಮ ಜನಿಕೆ ತಿಳುವಳಿಕೆ ಕೊಡ್ದು ಮಹಾ ದೊಡ್ಡ ಕೆಲ್ಸನೇ ಸರಿ ಸೋಂಪಣ್ಣ.

**ಸೊಂಪಣ್ಣ :** ಅಯ್ಯೋ ಬುಡಿ ನಮ್ಮ ಜನಿಕೆ ಎಷ್ಟು ಮಾಡಿರೂ ಅಷ್ಟೆ. ಬೂದಿಗುಡ್ಡೆ ಮುಂದೆ ಕೂರುವ ಕುರುಬರಂಗೆ. ನಮ್ಮಲ್ಲಿ ತುಂಬಾಜನ ಇನ್ನೂ ಒಳ್ಳೆ ಗೊದ್ದಗಳಂಗೆ ಆಡಿವೆ. ನಮ್ಮ ಜಾತಿ ಜನ ಎಲ್ಲವರಂಗೆ ಮುಂದುವರಿಯಕುತ ಗ್ಯಾನನೇ ಮಾಡ್ದುಲೆ. ಆ ಕೊಡಗು ಸಂಗಾತಿ ಬುಕ್ಕ್‌ಲಿ ಎಷ್ಟೊಂದು ಸರ್ತಿಬರ್ದ್ ಹೇಳಿಯೊಳೊ. ನಮ್ಮ ಜನ ಎದ್ದೇಳಿ. ಅಂಜಿಕಂಬುದು ಬುಡಿ, ನಮ್ಮ ಕುಲದ ಭಾಷೆ, ಕುಲದ ಆಚಾರ, ಬುಡುಬ್ಯಾಡಿತ, ಆದ್ರೆ ಈಗ ಎಷ್ಟ್ ಜನ ನಮ್ಮ ಹಬ್ಬಹರಿದಿನಗಳಲ್ಲಿ ಮದುವೆ ಜಂಬಾರಗಳಲ್ಲಿ ಹಿಂದೆ ಹಾಕುತ್ತಿದ್ದಂಗೆ ಕುಪ್ಪಸದಟ್ಟಿ, ಪೇಟ ಹಾಕಿವೆ? ಎಷ್ಟ್ ಜನ ನಮ್ಮ ಹಳೆ ಸಾಸ್ತ್ರ ಸಂಪ್ರದಾಯನ ಮಾಡಿವೆ? ಎಷ್ಟ್ ಜನ ನಮ್ಮ ಅಪ್ಪ ಅವ್ವನ ಭಾಷೆನ ಮಾತಾಡಿವೆ? ನಮ್ಮಲ್ಲಿ ಎಷ್ಟೋ ಜನಿಕೆ ಈತರ ನಡಕಂಬಕೇ ಅವಮಾನ ಆದಂಗೆ ಆಡಿವೆ. ಎಲ್ಲಾ ನೆರಮನೆದ್ ನೀರಾಂಬರ ಲಾಯಕುಟ್ಟುತಾ ಹೇಳಿವೆ.

**ರಾಂಪಣ್ಣ :** ಹೌದು ಸೊಂಪಣ್ಣ ನೀವು ಹೇಳ್ದು ಕಂಡಿತಾ ನಿಜ, ಈಗೆಲ್ಲಾ ನಮ್ಮ ಹೈಲೆವಲ್ ಜನ ತ್ತೇಳಿಕಂಬವು ಈ ಮದ್ವೆಗಳ ಹಬ್ಬಗಳ ಕಾಟಾಚಾರಕ್ಕೆ ಮಾಡ್ದಂಗೆ ಮಾಡಿವೆ. ಎಲ್ಲವುಕೂ ಹೈಲೆವಲ್, ದೊಡ್ಡ ಸಂಸ್ಕೃತಿ ತೇಳಿಕಂಡ್ ಯಾವ ಕಾರುಬಾರ್‌ಲೂ ಕುಡಿಯದು ತಿಂಬದು ಎರಡೇ ಮಾಡ್ದು. ಹಳೆಕಾಲದಂಗೆ ನಮ್ಮ ಜನ ಪ್ರೀತಿ ವಿಶ್ವಾಸಲಿ ಕೂಡ್ಯಾಡಿಕಂಡ್ ಒಗ್ಗಟ್‌ಲೀ ಇರ್ದು ಕಾಂಬದೆ ಇಲ್ಲೆ. ಒಬ್ಬಂದೊಬ್ಬ ದೂಷಣೆ ಹೇಳಿಕಂಡ್ ಆಡ್ಯಾಡಿ ಕಂಡೆವೆ.

**ಸೊಂಪಣ್ಣ :** ಇಲ್ಲೆ ರಾಂಪಣ್ಮ ನಮ್ಮ ಜನನ ಸರಿ ಮಾಡಕ್, ಎಲ್ಲದಕ್ಕೂ ನಮ್ಮ ಸ್ಥಾನ ಮಾನ ಯಾರಿಗೂ ಕಮ್ಮಿ ಇಲ್ಲೆ. ನಮ್ಮ ಸಂಸ್ಕೃತಿ ಬೇರೆ ಯಾವ ಸಂಸ್ಕೃತಿಗೂ ಕಮ್ಮಿ ಇಲ್ಲೆ. ನಮ್ಮ ಸಂಪತ್ತು ಶಕ್ತಿ ಕೂಡಾ ಬೇರಯವಕ್ಕಿಂತ ಕಮ್ಮಿ ಇಲ್ಲೆ ತ್ತೇಳಿ ಇವರ ಮನ್ಸಲಿ ಧೈರ್ಯ ತುಂಬಕ್ಕು. ಆಗ ನಮ್ಮವೆಲ್ಲಾ ಸರಿ ಆದವೆ. ಈ ಕೆಲ್ಸನೇ ನಮ್ಮ ಕೊಡಗು ಸಂಗಾತಿ ಪತ್ರಿಕೆ ಮಾಡುತಿರ್ದು. ಆದರೆ ನಮ್ಮ ಜನ ನಮ್ಮ ಭಾಷೆ, ದೇಶದ ಅಭಿಮಾನಕ್ಕಾದ್ರೂ ಇವರ ಪತ್ರಿಕೆನ ತಕಂಡ್ ಓದುತ್ತಿದ್ದರೆ ನಮ್ಮವೆಲ್ಲಾ ಬೇರೆ ಜಾತಿ ಜನರ ಎದಿರಿಗೆ ತಲೆ ಎತ್ತಿ, ಎದೆ ಉಬ್ಬಿಸಿ ನಿಲ್ಲಕ್, ಧೈರ್ಯಲಿ ನಾವು ಯಾವುದರಲ್ಲೂ ಕಮ್ಮಿ ಇಲ್ಲೆತಾ ಹೇಳಿಕಂಡ್ ಮೆರಿಯಕ್.

**ರಾಂಪಣ್ಣ :** ಮೆರೆಯಕ್ಕ್. ಖಂಡಿತಾ ನಮ್ಮ ಜನ ಮೆರಿಯಕ್ಕ್, ನಮ್ಮ ಜನ ಇಷ್ಟೊಂದ್ ಸಣ್ಣ ಪತ್ರಿಕೆನೆ ತಕಂಡ್ ಓದಿಕೆ ಹಿಂದುಮುಂದು ನೋಡಿವೆ. ಇನ್ನು ಇಂತ ಜನ ನಮ್ಮ ಜನರ ಏಳಿಗೆಗೋಸ್ಕರ ಮುಂದೆ ಬಂದ್ಯೆವ್ವ? ಎಲ್ಲಾ ನರ ಸತ್ತಂಗೆ ಆಡಿವೆ.

- ಮುಂದೆ ಉಟ್ಟು

---

## ಯಾರಿವಳು?

ಹುಟ್ಟಿ ಹರಿವಳು ಕಾವೇರಿ ತಲಕಾವೇರಿಯಲಿ
ನಲಿ-ನಲಿದಾಡುವಳು ಗಿರಿ-ಶಿಖರಗಳ ಕಣಿವೆಯಲಿ!
ಹಾವು ಹರಿದಾಡಿದಂಗೆ ಹೂ ಬಳ್ಳಿಯ ಕಾನನದಲಿ
ಓಡೋಡಿ ಬರುತಿಹಳು ಅತಿ ಆನಂದದಲಿ!!

ಬಾಲ್ಯವ ಕಳೆದು ದೊಡ್ಡವಳಾಗಿಹಳು ಹರಿ-ಹರಯದಲಿ
ಹಸಿ ಯೌವನವೀಗ ನೋಡಿದರೆ ಸುಂದರ ಮೈಸೂರಲಿ!
ಕೈಬೀಸಿ ಕರೆವಳು ಸೋದರಿ ಕನ್ನಿಕೆಯನು
ಅಪ್ಪಿಕೊಳ್ಳುವಳಾಕೆಯು ತಿರುಮ ಕೂಡಲಿನಲಿ!!

ಸೋದರಿಯಿಬ್ಬರೂ ಸಾಗುವರೊಂದಾಗಿ ಜೊತೆಯಲಿ
ಖಗ-ಮೃಗಗಳ ದಾಹ ನೀಗಿರುವ ದಯೆಯಲ್ಲಿ !
ತಡೆದರಿವರನ್ನು ಮುಂದೆ ಮೆಟ್ಟೂರಿನಲ್ಲಿ
ಎದರುವರೀ ಕನ್ನಡಿಗರು? ಜಿಗಿದರಾಚೆಗೆ ಶೌರ್ಯದಲಿ!!

ಹಿಂತಿರುಗಿ ನೋಡಿದರು ತಾವು ಬಂದ ಹಾದಿಯನು
ಕಾಣಿಸಿತಲ್ಲಿಗೂ ಸುಂದರ ಕನ್ನಡ ನಾಡು ಬೆಳ್ಳಿ ಬೆಳಕಂದದಲಿ
ಬಾಲ್ಯ - ಯೌವ್ವನವ ಮೆಲಕು ಹಾಕುತ ಸಾಗಿದರು ಮುಂದೆ
ವಿಲೀನವಾದರು ಒಂದಾಗಿ ಬಂಗಾಳ ಕೊಲ್ಲಿಯಲ್ಲಿ !!!

- ಹೊಸೊಕ್ಲು ರಾಧಮಣಿ ಪೊನ್ನಪ್ಪ
ಮೈಸೂರು - 11

---

# ಪತ್ರ ವಿಭಾಗ :



ಮಾನ್ಯರೆ

## ಮನಸಿದ್ದರೆ ಮಾರ್ಗ

ಮಾನವನು ತಾನು ಸಾಧಿಸಿದ ಮಹತ್ತರವಾದ ನಾಗರೀಕತೆಯನ್ನು ಮನಸ್ಸಿನ ಮೂಲಕವೇ ಸಾಧಿಸಿದ್ದು. ಮನಸ್ಸನ್ನು ಬೇರೆಡೆಗೆ ಹರಿಯಲು ಬಿಡದೆ ಏಕಚಿತ್ತದಿಂದ ಕ್ರೋಢಿಕರಿಸಿ ರೂಪಿಸಿರುವುದೆ "ಕೊಡಗು ಸಂಗಾತಿ" ಪತ್ರಿಕೆ ಬಿಡುಗಡೆಗೆ ಕಾರಣವಾಗಿದೆ. ಮನಸ್ಸೆನ್ನುವುದು ಕಣ್ಣಿಗೆ ಕಾಣಿಸದಿದ್ದರೂ ಕಾರ್ಯರೂಪ ಮಹತ್ತರವಾದದು. ಮನುಷ್ಯನು ಉನ್ನತ ಶಿಖರ ಭಾಗದಲ್ಲಿ ನಿಲ್ಲಬಲ್ಲನು, ಹಾಗೇ ಅಗಾಧವಾದ ಪಾತಾಳಕ್ಕೆ ತಳ್ಳುವುದು ಮನಸ್ಸು, ಸ್ವರ್ಗದಂತಹ ನರಕವನ್ನು ನರಕದಂತಹ ಸ್ವರ್ಗವನ್ನು ಸೃಷ್ಠಿಸಬಲ್ಲದು. ಈ ಮಾನವನ ಮನಸ್ಸು ಎಚ್ಚರವಿದ್ದಷ್ಟು ಕಾಲ ಮನುಷ್ಯ ಈ ಸೃಷ್ಠಿಯಲ್ಲಿ ಭಾವುಕ ಸಂಸ್ಕೃತಿ, ಸಹನೆ, ಸಂಪನ್ನ ನೋವು, ನಲಿವುಗಳನ್ನು ಅರಿತುಕೊಳ್ಳುವುದು ಮಾನವನ ಮನಸ್ಸು.

"ಮನಸ್ಸಿದ್ದರೆ ಮಾರ್ಗ" ಎಂಬ ನಾಣ್ನುಡಿ ಇದೆ. ಈ ಅಂಶವು ಸಂಗಾತಿ ಓದುಗರಿಗೆ ಮನದಟ್ಟಾದರೆ ಸಾಕು.

"ನನಗಾಗಿ ಎಂಬ ಪದವನ್ನು ಬಿಟ್ಟು, ನಮಗಾಗಿ ಎಂಬ ಅಂಶವನ್ನು ಉಪಯೋಗಿಸುವುದು ಒಳಿತು, ಈ ಅಂಶವು ಗೌಡ ಜನರ ಪ್ರಗತಿಕೋಸ್ಕರ ಮತ್ತೊಮ್ಮೆ ಮನನ ಮಾಡಿಕೊಳ್ಳುವ ಅಂಶವಾಗಿದೆ

- ಆಜಡ್ಕ ರಾಣಿ ಬಲಾಕೃಷ್ಣ, ಕುಶಾಲನಗರ.

ಪ್ರಿಯ ಸಂಪಾದಕರಿಗೆ

## "ಖಡ್ಗಕ್ಕಿಂತ ಲೇಖನಿ ಹರಿತ"

ಪತ್ರಿಕೆಗಳಿಗೆ ಹಲವಾರು ಮುಖಗಳಿವೆ. ಪತ್ರಿಕೆಯನ್ನು ಕೆಲವರು ಪಬ್ಲಿಸಿಟಿಗೋಸ್ಕರ ಬಳಸುತ್ತಾರೆ. ಅಂದರೆ ವ್ಯಕ್ತಿತ್ವವನ್ನು ಅಳವಡಿಸಿಕೊಳ್ಳುವುದಕೋಸ್ಕರ. ಕೆಲವು ನಿಜಾಂಶವನ್ನು ತಿಳಿಸುವುದಕ್ಕಾಗಿ ಪತ್ರಿಕೆಯನ್ನು ಮಾಧ್ಯಮವನ್ನಾಗಿ ಉಪಯೋಗಿಸುತ್ತಾರೆ. ಇನ್ನೂ ಕೆಲವರು ಮತಪ್ರಚಾರಕ್ಕೋಸ್ಕರ ಪತ್ರಿಕೆಯನ್ನು ಉಪಯೋಗಿಸುತ್ತಾರೆ. ಜನಾಂಗಗಳಲ್ಲಿ ನಡೆಯುವ ಆಗುಹೋಗುಗಳನ್ನು ತಿಳಿಸಲು ಸಹಪತ್ರಿಕೆಯನ್ನು ಬಳಸುತ್ತಾರೆ. ಇನ್ನು ಲೆಕ್ಕವಿಲ್ಲದಷ್ಟು ವಿಧಾನಗಳಿಗೆ ಪತ್ರಿಕೆಯನ್ನು ಬಳಸ ಬಹುದು. ನನ್ನ ಅಭಿಪ್ರಾಯದ ಪ್ರಕಾರ ಲೇಖನಿಯು ಖಡ್ಗಕ್ಕಿಂತಲೂ ಹರಿತ. ಪತ್ರಿಕೆಯ ಪ್ರಗತಿ ಅದರ ಸಿದ್ಧಾಂತ ಮತ್ತು ಬುನಾದಿಯ ಆಧಾರದ ಮೇಲೆ ಅಳವಡಿಸಿಕೊಂಡಿರುತ್ತದೆ. ಸದಾ ಕಾಲ ಪತ್ರಿಕೆ ಹೊರಬೀಳಬೇಕಾದರೆ ಅದಕ್ಕೆ ಇರತಕ್ಕ ಅವಿರತ ಶ್ರಮ, ದೃಢ ನಿರ್ಧಾರ, ಪ್ರೋತ್ಸಾಹ, ಪ್ರಸಾರ ಮಾಡುವ ಧೈರ್ಯ ಬಹಳ ಮೇಲ್ಮಟ್ಟದ್ದು. ಎಲ್ಲಾ ತರಹದ ಓದುಗಾರರನ್ನು ಪ್ರೇರಿಸುವ ಹಾಗೂ ಮೆಚ್ಚಿಸುವ ಪ್ರಭಾವಶಾಲಿ ಲಿಖಿತಗಳೊಂದಿಗೆ ನಿಮ್ಮ ಪತ್ರಿಕೆ ಹೊರಬಿದ್ದರೆ ನಿಮ್ಮ ಪತ್ರಿಕೆ ಖಂಡಿತ ಮುಂದೆ ಬರುತ್ತದೆ.

ಆ ಪರಮಾತ್ಮ ನಿಮಗೆ ಆ ಶಕ್ತಿ ಕೊಡಲಿ, ನಿಮ್ಮ ಪತ್ರಿಕೆ ಮುಂದೆ ಬರಲಿರುವ ಪೀಳಿಗೆಗಳಿಗೆ ನಂದಾದೀಪವಾಗಲಿ. ಓದುಗರ ಅರಿವನ್ನು ಹೆಚ್ಚಿಸಲಿ, ಎಂದು ಆ ಭಗವಂತನಲ್ಲಿ ಬೇಡುತ್ತಾ ನಿಮ್ಮ ಪತ್ರಿಕೆಗೆ ಶುಭ ಹಾರೈಸುತ್ತೇನೆ.

ಪತ್ರಿಕೆ ಹಿತಚಿಂತಕ

**ಕುದುಪಜೆ ಎ. ಹೇಮ್‌ರಾಜ್**

ಹಿರಿಯ ವಕೀಲರು, ಉಚ್ಛನ್ಯಾಯಾಲಯ, ಬೆಂಗಳೂರು

ಮಾನ್ಯರೆ,

## ಸಾಧನೆ

ಅಕ್ಟೋಬರ್ ತಿಂಗಳ "ಕೊಡಗು ಸಂಗಾತಿ" ಯು ನಮ್ಮ ಜನಾಂಗದಲ್ಲಿ ಅರಳಿದ ರಾಜ್ಯ, ರಾಷ್ಟ್ರಮಟ್ಟದ ಉತ್ತಮ ಕ್ರೀಡಾಪಟುವಾಗಿ ಹೊರಹೊಮ್ಮಿದ "ಏಕಲವ್ಯ ಪ್ರಶಸ್ತಿ" ಪುರಸ್ಕೃತ "ಉಳುವಾರನ ದೀಪಕ್" ರವರ ಸಾಧನೆಯನ್ನು ಹೊತ್ತು ತಂದಿತ್ತು. ಮುಂದೆಯೂ ಯಶಸ್ಸಿನ ಹಾದಿ ತುಳಿದು "ಖೇಲ್ ರತ್ನ" ಪ್ರಶಸ್ತಿಯನ್ನು ಸ್ವೀಕರಿಸುವಂತಾಗಲಿ ಎನ್ನುವುದು ನನ್ನ ಬಯಕೆ.

"ಕೊಡಗಿನಲ್ಲಿ ಸಾಮರಸ್ಯ ಮೂಡುವುದೇ?" ಶ್ರೀ ಪಟ್ಟಡ ಶಿವಕುಮಾರ್‌ರವರ ಲೇಖನ ಚಿಂತನಾರ್ಹವಾಗಿತ್ತು. 'ದ್ವೇಷದಿಂದ ದ್ವೇಷ ನಾಶವಾಗುವುದಿಲ್ಲ. ಪ್ರೇಮದಿಂದ ನಾಶವಾಗುತ್ತದೆ.' ಎನ್ನುವ ಬುದ್ಧನ ಮಾತು ಕೃತಿಯಾಗದೆ ಕಾರ್ಯರೂಪಕ್ಕೆ ಬರಬೇಕು. ಕೊಡಗಿಗೆ ಶ್ರೀಮಂತ ಜಿಲ್ಲೆಯೆಂಬ ಹೆಗ್ಗಳಿಕೆಯಿದೆ. ಹಾಗೆಯೇ ಪ್ರತಿಯೊಬ್ಬನ ಮನಸ್ಸೂ, ಜಾತಿ-ಮತ-ಅಸೂಯೆ ತೊಡೆದು ಶ್ರೀಮಂತ ಮನಸ್ಸಾದರೆ..... ಸಾಮರಸ್ಯ ಸಾಧ್ಯ. ಇಂತಹ ಉತ್ತಮ ಲೇಖನಗಳು ಮೂಡಿಬರಲಿ.

ಬಾರಿಕೆ ಶಿರೀನ್ ತಿಮ್ಮಯ್ಯ,

ಅಯ್ಯಂಗೇರಿ ಅಂಚೆ

## ಮಿ. ರಾಜುನ ಬಗ್ಗೆ ನಮ್ಮ ಅನಿಸಿಕೆ

ಮಾನ್ಯರೆ,

ಈ ಧಾರವಾಹಿಯನ್ನು ಸುರುವಿನಿಂದ ಕಡೆತನಕ ಓದಿ ಮೆಲಕು ಹಾಕುವಾಗ ರಾಜುವಿನ ಸಾಹಸ, ನ್ಯಾಯಕ್ಕಾಗಿ ಹೋರಾಟ ನಡೆಸುವ ಕೆಲಸಗಳು ಅಂತಹದನ್ನೆಲ್ಲಾ ಮನಸ್ಸಿಗೆ ಹಚ್ಚಿಕೊಂಡರೆ ರಕ್ತ ಕಾವೇರುತ್ತದೆ. ಸರಳ ಜೀವನ ನಡೆಸುವ ಮನುಷ್ಯನಿಗೆ ಇಂತಹ ತೊಡಕುಗಳು ಬರುತ್ತವೆ. ಅವನಿಗೆ ದೇವರ ಸಹಾಯ ಇದ್ದರೂ ಅದು ಆ ಕ್ಷಣ ದೊರೆಯುವುದಿಲ್ಲಾ. ಕೂಡಲೇ ಧರ್ಮ ಹೋರಾಟ ನಡೆಸಬೇಕಾದರೆ ಜನರ ಬೆಂಬಲ ಅಗತ್ಯ. ಅದಕ್ಕೆ ರಾಜಕೀಯ ದವರ ಹಿರಿಯ ಅಧಿಕಾರಿಗಳ ಅಡ್ಡಿ ಇರುತ್ತದೆ. ಹಾಗಾಗಿ ಈಗ ನಮ್ಮ ದೇಶದಲ್ಲಿ ಭ್ರಷ್ಟಾಚಾರ, ದರೋಡೆ ಭಯೋತ್ಪಾದನೆಗಳಿಗೆ ಬಡ ಅಮಾಯಕ ಜನರು ಬಲಿಯಾಗುತ್ತಾರೆ. ಹೊರಗಿನ ದೇಶ ಗಳಿಗೆ ಹೋಲಿಸಿ ನೋಡಿದರೆ ಅಮೇರಿಕಾದಲ್ಲಿ ಭಯೋತ್ಪಾದನೆ ನಡೆದ ಕೆಲವೇ ದಿನಗಳಲ್ಲಿ ಅಮೇರಿಕಾ ತನ್ನ ಸೇಡನ್ನು ತೀರಿಸಿ ಕೊಳ್ಳುತ್ತಿದೆ. ಆದರೆ ನಮ್ಮ ದೇಶದ ಕಾಶ್ಮೀರದಲ್ಲಿ ಹಲವಾರು

ವರ್ಷಗಳಿಂದ ನಡೆಯುತ್ತಿರುವ ಭಯೋತ್ಪಾದನೆಯಿಂದ ಬಡಜನರು, ಸೈನಿಕರು ಪ್ರಾಣ ಕಳೆದುಕೊಳ್ಳುತ್ತಿದ್ದಾರೆ. ಅಂತಹದನ್ನು ತೊಡೆದು ಹಾಕಲಿಕ್ಕೆ ಹಿರಿಯ ಅಧಿಕಾರಿಗಳಿಗೆ ಮಿ. ರಾಜುವಿನ ಛಲ ಬರಲಿ ಹಾಗೂ ಈ ಧಾರವಾಹಿಯನ್ನು ಬರೆದು ಹುರುಪು ನೀಡಿದ ಶಂಕರನ ಬಸಪ್ಪನವರಿಗೆ ತುಂಬು ಧನ್ಯವಾದಗಳು.

ತೆಕ್ಕಡೆ ರಘುನಾಥ, ಮುತ್ತಾರ್ಮುಡಿ

## 'ಅರೆಗನ್ನಡ' ಭಾಷೆ ಕೊಡಗು ಗೌಡ ಜನಾಂಗದ ಭಾಷೆ

ಬಹಳ ವರ್ಷಗಳ ಸಂಶೋಧನೆ, ವಾದ, ವಿವಾದಗಳ ನಂತರ, ಕೊಡಗಿನ ಗೌಡರು ಮಾತಾಡುವ ಭಾಷೆ "ಅರೆಗನ್ನಡ ಬಾಷೆ" ಎಂದು ಮಡಿಕೇರಿಯಲ್ಲಿ ಕೊಡಗು ಗೌಡ ಸಮಾಜದ ಅಧ್ಯಕ್ಷರ ಸಮ್ಮುಖದಲ್ಲಿ ಸಪ್ತಂಬರ್ ತಿಂಗಳಲ್ಲಿ ಸೇರಿದ ಮುಖಂಡರ ಸಭೆಯಲ್ಲಿ ನಿರ್ಧಾರಕ್ಕೆ ಬಂದದ್ದು ತುಂಬಾ ಸಂತೋಷದ ಸುದ್ಧಿ. ಹಾಗೆ ವಿವಿದೆಡೆಗಳಲ್ಲಿರುವ ಕೊಡಗು ಗೌಡರ, ಎಲ್ಲಾ ಸಂಘ, ಸಂಸ್ಥೆ, ಸಮಾಜಗಳನ್ನು ರಚಿಸಿ ತೀರ್ಮಾನಿಸಲಾಗುವುದೆಂದು ತಿಳಿಯಲು ಜನಾಂಗದ ಜನರೆಲ್ಲರೂ ಸಂತೋಷ ಪಡಬೇಕಾದ ವಿಷಯ. ಹೀಗೆ ಮಾಡುವುದರಿಂದ ಅಳಿಸಿ ಹೋಗುತ್ತಿರುವ ನಮ್ಮ ಜನಾಂಗದ ಭಾಷೆ ಸಂಸ್ಕೃತಿ, ಸಂಪ್ರದಾಯ, ಆಚಾರ, ವಿಚಾರ, ಹಬ್ಬ ಹರಿದಿನಗಳ ಕಟ್ಟು, ನಿಟ್ಟುಗಳನ್ನು ಉಳಿಸಿ, ಯುವ ಪೀಳಿಗೆಗಳಿಗೆ ರವಾನಿಸಿ, ಬೆಳೆಯಿಸಬುಹದು.

'ಅರೆಭಾಷೆ' ಎಂದರೆ ಅರ್ಧಭಾಷೆ ಎಂದು ಎಲ್ಲರೂ ತಿಳಿದಂತೆ ಅರ್ಥವಾದರು ಇದು ಯಾವ ಭಾಷೆಯ ಅರ್ಧವೆನ್ನುವುದು ಇಲ್ಲಿ ಜಿಜ್ಞಾಸೆಯಾಗಿದೆ.

ವಿಜಯನಗರದ ಪಥನದ ನಂತರ, ವಿದ್ಯೆಯಲ್ಲಿಯೂ, ಬುದ್ಧಿಯಲ್ಲಿಯೂ ಆರ್ಥಿಕಸ್ಥಿತಿಯಲ್ಲಿಯೂ ಹಿಂದುಳಿದಿದ್ದ ನಮ್ಮ ಜನಾಂಗದ ಹಿರಿಯರು ದಕ್ಷಿಣಕ್ಕೆ ನಾನಾ ಕಡೆಯಾಗಿ ವಲಸೆ ಬಂದರು. ಹಾಗೆ ಉಪ್ಪಿನಂಗಡಿ, ಬಂಟ್ವಾಳ, ಮಾರ್ಗವಾಗಿ ಕರಾವಳಿ ಕಡೆ ಹೋದವರು, ಅಲ್ಲಿ ಬಳಕೆಯಲ್ಲಿದ್ದ ತುಳು ಮಾತಿನ ಜನರೊಡನೆ ಬೆರೆತು ತುಳು ಮಾತನ್ನೇ ಮನೆ ಮಾತಾಗಿ ಕಲಿತರು. ಇನ್ನೊಂದು ಗುಂಪು ಸುಬ್ರಮಣ್ಯ ಬೆಳ್ಳಾರೆ, ಗುತ್ತಿಗಾರ್‌ಗಾಗಿ ಸುಳ್ಯ ಕಡೆ ಬಂದವರು, ಅಲ್ಲಿ ಧನಿಕರಾಗಿ ಜಮೀನು ಹಿಡುವಳಿ ದಾರರಾಗಿದ್ದ ಹವ್ಯಕ ಬ್ರಾಹ್ಮಣರೊಡನೆ ಮಿಳಿತವಾಗಿ, ಸ್ವಲ್ಪ ಓರೆಕೋರೆಯಾಗಿ ಅವರ ಮಾತನ್ನೇ ಮನೆ ಮಾತಾಗಿ ಕಲಿತರು. (ಅರೆಭಾಷೆ ಅರೆಗನ್ನಡ) ಇನ್ನೊಂದು ಸ್ವಲ್ಪ ಜನರು ಮಂಜ್ರಬಾದ್, ಚಿಕ್ಕಮಗಳೂರು, ಸಕಲೇಶಪುರ, ಐಗೂರು ದಾರಿಯಾಗಿ ಬಂದವರು, ಅಲ್ಲಿ ಪ್ರಬಲರಾಗಿ ಕನ್ನಡ ಮಾತಾಡುತ್ತಿದ್ದ ಹಾಲೇರಿ ವಂಶದ ಲಿಂಗಾಯಿತ ಜನರೊಡನೆ ಸೇರಿ, ಕನ್ನಡವನ್ನೇ ಮನೆಮಾತಾಗಿ ಇಟ್ಟುಕೊಂಡರು.

ನಮ್ಮ ಹಿರಿಯರು 18ನೇ ಶತಮಾನದ ಕೊನೆಯ ದಶಕದಲ್ಲೂ ಮತ್ತು 19ನೇ ಶತಮಾನದ ಸುರುವಿನ ದಶಕದಲ್ಲಿಯೂ ಅರುತೋಡು, ತೊಡಿಕಾನ ದಾರಿಯಾಗಿ ಕಾಲ್ನಡಿಗೆಯಲ್ಲಿ ಪಶ್ಚಿಮ ಘಟ್ಟದ ಕಣಿವೆಯ ದಾರಿ ಹಿಡಿದು ಕೊಡಗಿನ 'ತಾವು ನಾಡಿಗೆ (ಈಗಿನ ಭಾಮಂಡ್ಲ ನಾಡು) ಬಂದು ತಲುಪಿದರು. ಭಾಗಮಂಡ್ಲದ ಭಗಂಡೇಶ್ವರ ದೇವಸ್ಥಾನವನ್ನು ಮೈಸೂರಿನ ಮುಸ್ಲಿಂ ರಾಜ 'ಟಿಪ್ಪು' ಎರಡನೆ ಬಾರಿಗೆ ಕೊಳ್ಳೆ ಹೊಡೆದು, ಅಪಾರ ಚಿನ್ನಾಭರಣ ದೋಚಿಕೊಂಡು, ಸುತ್ತಮುತ್ತಲಿನ ನಿವಾಸಿಗಳನ್ನು ಸೆರೆಹಿಡಿದು ಕೊಂಡು, ವೀರರಾಜಪೇಟೆ, ಪೆರಿಯಾಪಟ್ಣ ದಾರಿಯಾಗಿ, ಯೋಧರುನ್ನು "ಶ್ರೀರಂಗಪಟ್ಣ" ಕ್ಕೆ ಕೊಂಡೊಯ್ದು ಜೈಲಿನಲ್ಲಿಟ್ಟು, ಮತಾಂತರಿಸಿದನು. ಹಾಗಾಗಿ ಭಗಂಡೇಶ್ವರ ದೇವಸ್ಥಾನದಲ್ಲಿ ಅರ್ಚಕರಿಲ್ಲದೆ ಪೂಜೆ, ಪುರಸ್ಕಾರ ನಿಂತುಹೋಗಿತ್ತು. ಉಳುವವರಿಲ್ಲದೆ ಪಾಳು ಬಿದ್ದಿದ್ದ ಭೂಮಿಗಳನ್ನು ಅಂದಿನ ಕೊಡಗಿನ ಸುಳ್ಯದಿಂದ ಬಂದಿದ್ದ ನಮ್ಮ ಹಿರಿಯರಿಗೆ ಕೃಷಿ ಮಾಡಲು ಸರಕಾರದಿಂದ ಹಕ್ಕು ಭದ್ರತೆಯ ಕರಾರು ಪತ್ರಿಕೆಗಳನ್ನು ಕೊಡಗಿನ ರಾಜ "ವೀರರಾಜೇಂದ್ರ" ಒಡೆಯರು ಮಾಡಿಕೊಟ್ಟರು. ಹಾಗೆ ಇವರೊಡನೆ ಬಂದವರಲ್ಲಿ ಕೃಷಿಗೆ ಸಂಬಂಧಪಟ್ಟ, ಎಲ್ಲಾ ವೃತ್ತಿಯ ಜನರನ್ನು, ಬ್ರಾಹ್ಮಣರನ್ನೂ ಬರಮಾಡಿಸಿದ್ದರು. ರಾಜ ತನ್ನ ರಾಜ್ಯದ ವಿವಿಧ ಭಾಗಗಳಿಂದ ತರಿಸಿ, ನಾಶ ಹೊಂದಿದ, ಪಾಳು ಬಿದ್ದಿದ ಭೂಮಿಯನ್ನು ಉಪಯೋಗಿಸಿ ಕೃಷಿಗೆ ಉಪಯೋಗಿಸುವ ಸಲುವಾಗಿಯೂ, ಯೋಧರ ಸಹಕಾರಕ್ಕಾಗಿಯೂ ಬರಮಾಡಿಸಿದ್ದನು.

ವಿದ್ಯೆಯುಲ್ಲಿಯೂ, ಆರ್ಥಿಕಸ್ಥಿತಿಯಲ್ಲಿಯೂ ಬಹಳ ಹಿಂದುಳಿದಿದ್ದ ಹೀಗೆ ಬಂದ ನಮ್ಮ ಹಿರಿಯರು ನಡುಗನ್ನಡ (ಅರೆಗನ್ನಡ ಭಾಷೆ) ಭಾಷೆಯನ್ನೇ ಮನೆ ಮಾತಾಗಿ ಮುಂದು ವರ್ಸಿದರು. ಆಗ ವರ್ಷದ ಆರು ತಿಂಗಳು ಭಾಗಮಂಡ್ಲದಲ್ಲಿ ವಿಪರೀತ ಮಳೆ ಸುರಿಯುತ್ತಿತ್ತು. ಗದ್ದೆ ಕೆಲಸವನ್ನೇ ಅವಲಂಬಿಸಿದ ನಮ್ಮ ಹಿರಿಯರು ಮಳೆಗಾಲ ಕೆಸರಿನಲ್ಲಿ ಕೆಲಸ ಮಾಡುವಾಗ ಚಳಿಗೆ ತಪ್ಪದೆ ಬಾಯಿ ತುಂಬಾ ಎಲೆ, ಅಡಿಕೆ, ಹೊಗೆಸೊಪ್ಪನ್ನು ಜಗಿಯುತ್ತಿದ್ದರು. ಮುದುಕ ಮುದುಕಿಯರು ಬಾಯಲ್ಲಿ ಹಲ್ಲಿಲ್ಲದಿದ್ದರೂ, ಕಲ್ಲಿನಿಂದ ಎಲೆ, ಅಡಿಕೆ ಹೊಗೆ ಸೊಪ್ಪನ್ನು ಸುಣ್ಣ ಸೇರಿಸಿ ಜಜ್ಜಿ, ಊಟ ಮಾಡುವಾಗ ಬಿಟ್ಟರೆ, ಬಾಕಿ ಎಲ್ಲಾ ಸಮಯದಲ್ಲಿ ಬಾಯಲ್ಲೇ ಇಟ್ಟು ಕೊಳ್ಳುತ್ತಿದ್ದರು. ಎಲೆ ಅಡಿಕೆ ಬಾಯಲ್ಲಿಟ್ಟುಕೊಂಡು ಮಾತಾಡುವಾಗ ಅವರ ಉಚ್ಚಾರಣೆ ತೊದಲುತ್ತಿತ್ತು. ಸಣ್ಣ ಮಕ್ಕಳನ್ನು ತೊಡೆಯ ಮೇಲೆ ಕೂರಿಸಿ ಕೊಂಡು ಮಾತಾಡುತ್ತಿದ್ದ ಇವರ ಮಾತನ್ನೇ ಮಕ್ಕಳು ಕಲಿತು 'ಅರೆಗನ್ನಡ (ಅರೆಭಾಷೆ) ವಾಯ್ತೆಂದು ನನ್ನ ಅನಿಸಿಕೆ

ನನಗೆ ತಿಳಿದಂತೆ 1940ರ ದಶಕದಲ್ಲಿ ಭಾಗಮಂಡ್ಲದಲ್ಲಿ ರಾವು ಬಹದ್ದೂರು ಶ್ರೀಪತಿರಾವು ಮತ್ತು ಶ್ರೀನಿವಾಸರಾವು ಎಂಬ ಇಬ್ಬರು ವಿದ್ಯಾವಂತರಾದ, ಧನಿಕರೂ ಆದ ಸಹೋದರರಿದ್ದರು. ಅವರ ಹೆಸರನ್ನು ನಾಡಿನ ಜನರು ಉಚ್ಚಾರಣೆ ಮಾಡಲಾರದೆ "ಶ್ರೀಕಾಪತಿ ಮತ್ತು ಚೀನಪ್ಪಯ್ಯ" ಎಂದು ಕರೆಯುತ್ತಿದ್ದರು. ಅದೇ ರೀತಿ "ಆದಮ್" (Adam) ಎಂಬ ಭಟ್ಕಳ ಕಡೆಯ ಬಟ್ಟೆ ವ್ಯಾಪಾರಿಯೊಬ್ಬರಿದ್ದರು. ಆತನ ಹೆಸರನ್ನೂ ಉಚ್ಚಾರಣೆ ಮಾಡಲಾರದೆ ಊರಿನ ಜನರು "ದಾಮ್ ದಾಮ್" ತುರುಕ ಎಂದು ಕರೆಯುತ್ತಿದ್ದರು.

ಈತನು ಬಟ್ಟೆಯನ್ನು ತಲೆ ಹೊರೆಯಲ್ಲಿ ಊರಿನ ಮನೆ ಮನೆಗೆ ಮಾರಲು ಹೋಗುತ್ತಿದ್ದ. ಹಾಗಾಗಿ ಆತನಿಗೆ "ಮನೆ ಮನೆ

ತುರುಕ್ ಎಂಬ ಹೆಸರೂ ಇತ್ತು. ಈ ರೀತಿ ಅರೆಗನ್ನಡ ಬಾಷೆ ಉಂಟಾಗಿರಬಹುದಾಗಿ ನನ್ನ ಭಾವನೆ.

ಎರಡನೇ ಮಹಾಯುದ್ಧದ ಸಮಯ ಬ್ರಿಟಿಷರು ಆಗ ನಮ್ಮನ್ನು ಆಳುತ್ತಿದ್ದರು. ಆದುದರಿಂದ ಇಂಗ್ಲೀಷ್ ಕಲಿಯಲು ಬಹಳ ಪ್ರಾಮುಖ್ಯತೆ ಇತ್ತು. ಕೋರ್ಟು, ಕಛೇರಿ, ಕೆಲಸಕ್ಕೆ ಮಡಿಕೇರಿಗೆ ಹೋದವರು ಹಿಂತಿರುಗಿದಾಗ ಯಾರಾದರೂ ಕೇಸು ಏನಾಯ್ತು ಎಂದು ಕೇಳಿದಾಗ 'ಅಡ್ಜನ್ ಆತ್' (Adjaurn) ಮುಂದಿನ ಹಿಯರಿಂಗ್ (hearing) ಬರುವ ತಿಂಗಳ ಹದಿನೈದಕ್ಕೆಗಡ ಎನ್ನುತ್ತಿದ್ದರು.

ನಂಗಾರು ಅಪ್ಪಾಜಿ, ಬೆಂಗಳೂರು

ವಿ. ಸೂ. : ತಾವು ತಮ್ಮ ಅನಿಸಿಕೆಯನ್ನು ತಿಳಿಸಿದ್ದೀರಿ. ನಾಲಿಗೆ ದಪ್ಪವಾದಾಗ ಮಾತು ತೊದಲುತ್ತೆ ಸಹಜ. ಆದರೆ ಅರೆಗನ್ನಡ ಭಾಷೆಯು ಖಂಡಿತವಾಗಿಯೂ ನಡುಗನ್ನಡ ಭಾಷೆ ಯೆಂದೆ ನಮ್ಮ ಅರಿವಿಗೆ ಬಂದಿದೆ. ಈ ಬಗ್ಗೆ ನಮ್ಮ ಯುವ ಪೀಳಿಗೆ ಯವರಿಂದ ಭಾಷೆ ಮತ್ತು ಸಂಸ್ಕೃತಿ ಬಗ್ಗೆ (ಹತ್ತು ಕುಟುಂಬ ಹದಿನೆಂಟು ಗೋತ್ರದ) ತೀವ್ರತರದ ಸಂಶೋಧನೆ ಉತ್ಪನ್ನವಾದಾಗ ಮಾತ್ರ ನಿಜ ತಿಳಿಯಬಹುದು. ಅಲ್ಲಿಯ ತನಕ ತಾಳ್ಮೆ ಇರಲಿ. ಯಾವುದೇ ವಿಷಯವನ್ನು ಲಘುವಾಗಿ ಪರಿಗಣಿಸುವುದ ಬೇಡ.

- ಸಂಪಾದಕಿ.

ಮಾನ್ಯರೆ,

## ನಂಗೆ ಆದ ತೃಪ್ತಿ ಅಪ್ಪಿಷ್ಟಲ್ಲ

ಕಳ್ದ ತಿಂಗಳ ಕೊಡಗು ಸಂಗಾತಿ ಸಿಕ್ಕಿ ಓದಿ ನೋಡ್ದೆ. ನಿಮ್ಮ ಪೇಪರ್‌ಲಿ ಸಂಪಾಜೆ ಕಾರ್ಯಕ್ರಮನ ಸಂಪೂರ್ಣ ವಿವರ ಕೊಟ್ಟ್ ಬರ್ದೋಳರಿ. ಇದರ ಓದಿ ನಂಗೆ ಆದ ತೃಪ್ತಿ ಅಪ್ಪಿಷ್ಟಲ್ಲ. ಆದರೆ ಒಂದು ಬೇಜಾರದ ಸಂಗತಿ ಹೇಳ್ನೆ. ಮೂರು ಕೊಡವ ಪತ್ರಿಕೆಗ ವಳೊ. ಆ ಪೈಕಿ ಒಂದು ಪತ್ರಿಕೆನ ಉಪಸಂಪಾದಕಿ ನಮ್ಮ ಅಕಾಡೆಮಿ ಸದಸ್ಯೆ ಕೂಡ. ಆದರೂ ಈ ಕಾರ್ಯಕ್ರಮಕ್ಕೆ ಬಾತಿಲ್ಲೆ ಇಲ್ಲೆ. ಅದರ ವಿಚಾರಲಿ ನಾಲ್ಕ್ ಗೆರೆ ಬರ್ತ್‌ಲೆ. ಆಂದೋಲನ ಪತ್ರಿಕೆಲಿ ಮಾತ್ರ ಸ್ವಲ್ಪ ಬರ್ದಿದ್ದೊ. ಅಲ್ಲಿನ ಕಾರ್ಯಕ್ರಮನ ಮೆಚ್ಚಿ ಕೆಲವು ವಿದ್ವಾಂಸರ್ ನಂಗೆ ಭಾರೀ ಲಾಯಕ್ಕಾದ ಕಾಗದ ಬರ್ದೋಳೊ.

ಏನಾರಾಗಲಿ ನಿಮ್ಮ ಪತ್ರಿಕೆಲಿ ಬಂದದರ ಪೂರ್ಣ ಜೆರಾಕ್ಸ್ ಮಾಡ್ಸಿ ನಮ್ಮ ಎಲ್ಲಾ ಸದಸ್ಯರಿಗೂ, ಉಸ್ತುವಾರಿ ಮಂತ್ರಿಗೂ ಕಳ್ಸಿಕೊಟ್ಟೋಳೆ. ಅಷ್ಟೊಂದು ವಿವರ ಬರ್ದ ನಿಮ್ಮ ವರದಿಗಾರ ಪಟ್ಟಡ ಶಿವಕುಮಾರಂಗೂ ನನ್ನ ಪ್ರತ್ಯೇಕ ವಂದನೆ. ಕಂಡಲ್ಲಿ ಮಾತಾಡ್ನೊ.

ಬಾಚರಣಿಯಂಡ ಪಿ. ಅಪ್ಪಣ್ಣ

ಅಧ್ಯಕ್ಷ, ಕರ್ನಾಟಕ ಕೊಡವ ಸಾಹಿತ್ಯ ಅಕಾಡೆಮಿ, ಕುಶಾಲನಗರ

ನಾಡ ಪ್ರೀತಿರ ಅಕ್ಕಯ್ಯಂಗ್,

## ಒಂದ್ಮಾತು

ಬಹಳ ಸಮಯದ ನಂತರ ಈ ಬರಹ. ಕಾರಣ ನನ್ನ ಅಸಾಯಕತೆ, ಆರೋಗ್ಯ, ಮನಸ್ಸಿನ ಚಿಂತನೆ ಇಷ್ಟಾದರೂ ಲೇಖನಿ ಹಿಡಿಯುವ ಒಂದು ಹುಚ್ಚು ಅಭ್ಯಾಸ.

ಕೊಡಗು ಸಂಗಾತಿ ಅಕ್ಟೋಬರ್ ಒಂದರ ಪ್ರತಿ ತಲುಪಿತು. ಅದರಲ್ಲಿ ಸಂಪಾಜೆಯಲ್ಲಿ ನಡೆದ ಸಾಹಿತ್ಯ ಕಾರ್ಯಕ್ರಮವನ್ನು ನಿರೂಪಿಸಿದ್ದೀರಿ. ಮನಸ್ಸಿಲ್ಲದ ಮನಸ್ಸಿನಲ್ಲಿ ಒತ್ತಡ ನಿಮಿತ್ತ ನಾನು ಆ ಸೌಂದರ್ಯವನ್ನು ಸವಿದೆನು. ಕಾರ್ಯಕ್ರಮ ಏನೇ ಇರಲಿ ನನ್ನ ಸ್ವಂತ ಅನುಭವ ಹೀಗಿದೆ.

ಸಂಪಾಜೆಯಲ್ಲಿ ಭಾಷೆಗಳ ಸಾಮರಸ್ಯ ಕಾರ್ಯಕ್ರಮ ಜೀವನಾಧಾರ, ನನ್ನ ಭಾಷೆ ನನಗೆ ಶ್ರೇಷ್ಠ. ಇತರ ಭಾಷೆಗಳು ನಮ್ಮ ಭಾಷೆಗೆ ಮೆರಗು ಕೊಡುತ್ತದೆ. ಒಬ್ಬ ಗೃಹಿಣಿ ಅನೇಕ ವಿಧವಾದ ಆಭರಣಗಳನ್ನು ಧರಿಸಿ ತನ್ನನ್ನು ಸಿಂಗರಿಸಿಕೊಳ್ಳುತ್ತಾಳೆ. ಅವಳು ಧರಿಸಿದ ಆಭರಣಗಳು ಎಲ್ಲಾ ಹೊಳಪು ಬೀರುತ್ತಿದ್ದರೂ ಅವಳ ತಾಳಿ ಎಂಬ ಆಭರಣ ಶ್ರೇಷ್ಠವಾದದ್ದು. ಪವಿತ್ರವಾದದ್ದು, ಅದನ್ನವಳು ಬಿಚ್ಚಲು ಒಪ್ಪುವುದೇ ಇಲ್ಲ. ಯಾಕೆ? ಅದು ತನ್ನದೆಂಬಸ್ವಾಭಿಮಾನ. ಹಾಗೆಯೇ ನಮ್ಮ ಭಾಷೆ ನಮಗೆ ಪವಿತ್ರ. ಅದೇ ತಾಯಿಭಾಷೆ. ಅದನ್ನು ಮೊಟ್ಟ ಮೊದಲು ಕಲಿತು ನಂತರ ಬೇರೆ ಭಾಷೆ ಕಲಿಯುವ ಇದನ್ನೇ ನಾನು ಮಾತಾಡಿದ್ದು.

ಎನ್. ಎಸ್. ದೇವಿ ಪ್ರಸಾದರೆಂದರೆ ಕೊಡವ ವಿರೋಧಿ ಎಂದಿದ್ದ ಸಮಯ ಒಂದಿತ್ತು. ಅದು ಇಂದು ಮಾಸುತ್ತಾ ಬಂದಿದೆ. ಗೌಡರಿಗೂ ಕೊಡವರಿಗೂ ನಿಮ್ಮ ಪತ್ರಿಕೆಯಿಂದ ಸ್ವಲ್ಪ ಸ್ವಲ್ಪ ಅರಿವು ಮೂಡುತ್ತಿದೆ. ನಾವಿಂದು ಒಗ್ಗಟ್ಟಿನಲ್ಲಿಲ್ಲದೆ ಹೋದರೆ ಕೊಡಗು ಕೇರಳವಾಗುವುದು.

ಕೊಡಗಿನ ಏಳ್ಗೆಗೆ, ಕೊಡಗಿನ ಸೌಂದರ್ಯಕ್ಕೆ ಶಿಲಾಸಹಿತ ಸಾಮರಸಕ್ಕೆ ಮುಖ್ಯ ಕಾರಣ ಕೊಡವರು ಮತ್ತು ಗೌಡರು. ನಮಗೆ ಕೊಡವ ಭಾಷೆ ಇದೆ. ಗೌಡರಿಗೆ ಅರೆಗನ್ನಡ ಭಾಷೆ ಇದೆ. ನೀವು ಅದನ್ನು ಅರೆಭಾಷೆ ಎನ್ನುತ್ತೀರಿ. ಭಾಷೆಗಳಲ್ಲಿ ಸಾಮರಸ್ಯ ಕಂಡರೆ ನಮ್ಮ ಮಿಲನದಲ್ಲಿ ಸಾಮರಸ್ಯ ಏಕೆ ಕಾಣಬಾರದು? ಕೊಡವರು ಗೌಡರು ಹೀಗೆ ಒಬ್ಬರನೊಬ್ಬರು ದ್ವೇಷಿಸುತ್ತ, ದೂಷಿಸುತ್ತಾ ಹೋದರೆ ಕೇರಳವದರಿಗೆ ಅನುಕೂಲ. ಕೊಡಗು ನಮ್ಮದು. ನಾವು ಎಂದರೆ ಕೊಡವರು, ಗೌಡರು ಇವರದೇ ಸಿಂಹಪಾಲು. ಉಳಿದವರ ಪಾಲೂ ಇದೆ.

ಕೊಡವ ಸಮಾಜದ ಕಾರ್ಯದಲ್ಲಿ ಗೌಡರನ್ನೇಕೆ ಕರೆಯಬಾರದು? ಹಾಗೆಯೇ ಗೌಡ ಸಮಾಜದ ಕಾರ್ಯಕ್ರಮಕ್ಕೆ ಕೊಡವರು ಏಕೆ ಬರಬಾರದು? ನಾವು ಮನುಷ್ಯರಲ್ಲವೇ? ನಮ್ಮ ರಕ್ತ ನಿಮ್ಮಲ್ಲಿದೆ. ನಿಮ್ಮ ರಕ್ತ ನಮ್ಮಲ್ಲಿದೆ. ನಮ್ಮಿಬ್ಬರಿಗೂ ಬದುಕಲು ಕೊಡಗು ಮಣ್ಣು, ಕೊಡಗು ಗಾಳಿ, ಕೊಡಗು ನೀರು ಇದೆ. ಹಾಗಿದ್ದರೆ ನಮ್ಮ ನಮ್ಮೊಳಗೇಕೆ ಅನುಮಾನ?

ಕೊಡವರು ಗೌಡರು ಒಂದಾಗಿ ಕೊಡಗನ್ನು ಆಳುತ್ತೇವೆಂಬ ಕನಸು ಕಾಣುತ್ತಿದ್ದೇನೆ. ನನಗೆ ರಾಜಕೀಯ ಬೆಂಬಲವಿಲ್ಲ, ಸಂಪತ್ತಿಲ್ಲ. ಆರೋಗ್ಯವಿಲ್ಲ, ಯೌವನ ಇಲ್ಲ. ಆದರೂ ಆಸೆ ಎಂಬುದಿದೆ. ಒಂದಾಗುವ ಕನಸು ನನಸಾಗುವುದೋ ಇಲ್ಲವೋ ಹೇಳಲಾರೆ. ಇಂದಲ್ಲದಿದ್ದರೆ ನಾಳೆ ನಾವು ಒಂದಾಗುತ್ತೇವೆ ಎಂಬ

ಭರವಸೆ ಇದೆ. ಇದನ್ನು ವಿರೋಧಿಸುವವರೂ ಇದ್ದಾರೆ. ಅವರು ಸ್ವಾರ್ಥಿಗಳೇ. ತಾವು ಉದ್ಧಾರವಾಗುವುದೂ ಇಲ್ಲ, ಉದ್ಧಾರವಾಗುವವರನ್ನು ಬಿಡುವುದೂ ಇಲ್ಲ.

ಕೈಲು ಪೊಳ್ದು ಕಾವೇರಿಚಂಗ್ರಾಂದಿ, ಪುತ್ತರಿಗಳನ್ನು ಇಂದುಕೊಡವ ಸಮಾಜದಲ್ಲಿ ಗೌಡ ಸಮಾಜದಲ್ಲಿ ಆಚರಿಸುತ್ತೇವೆ ಅದನ್ನು ಎರಡೂ ಸಮಾಜ ಸೇರಿ ಒಂದ್ ದಿನ ಒಂದೇ ವೇದಿಕೆಯಲ್ಲಿ ಏಕೆ ನಡೆಸಬಾರದು?

ನಾಡ ಹಬ್ಬಗಳನ್ನು ಎಲ್ಲರೂ ಒಟ್ಟಾಗಿ ಏಕೆ ಆಚರಿಸಬಾರದು. ಕಾವೇರಿ ಚಂದ್ರಾಂದಿಯೆಂದು ಎಲ್ಲರೂ ಒಟ್ಟಿಗೆ ತೀರ್ಥ ಸ್ನಾನ ಮಾಡುವುದಿಲ್ಲವೇ? ಈ ಒಮ್ಮತ ಬೇರೆ ಸಂದರ್ಭದಲ್ಲಿ ಏಕೆ ನಾವು ಕೊಡವರು, ನೀವು ಗೌಡರು? ಶಾಂತ ಚಿತ್ತದಿಂದ ಯೋಚಿಸಿ ನೋಡಿ. ಹಗೆತನವಾಗಲೀ ಸಿರಿತನವಾಗಲೀ, ಸ್ನೇಹ ಎಂದಿಗೂ ಶಾಶ್ವತವಲ್ಲ. ಎಲ್ಲಾ ಸಂದರ್ಭಕ್ಕನುಸಾರ. ಅಂದು ನಮಗೆ ಇಂದಿನಷ್ಟು ವಿದ್ಯೆ ಇರಲಿಲ್ಲ. ವಿದ್ಯೆ ಕಲಿತೆವು. ಸಂಪಾದನೆ ಕಂಡುಕೊಂಡೆವು, ನಮ್ಮ ನಮ್ಮ ಸಮಾಜದಲ್ಲೇ ನಾವೇ ಬೇರೆ ಬೇರೆಯಾದೆವು. ಇದು ಮಾನವತ್ವವೇ? ನಿಮ್ಮನ್ನು ನೀವು ವಿಚಾರಣೆ ಮಾಡಿಕೊಳ್ಳಿ.

ಕೊಡವರೂ ಗೌಡರುಗಳೂ ಒಂದಾಗ ಬೇಕೆಂಬ ದೃಢ ನಿಲುವು ತಳೆಯಿರಿ. ಬಾಳು ಬಂಗಾರವಾಗುವುದು. ಇಲ್ಲಿ ಬೆಕ್ಕಿಗೆ ಗಂಟೆ ಕಟ್ಟುವವರು ಯಾರು? ಎಂಬ ಪ್ರಶ್ನೆ ಬರಬಹುದು. ಸಮಾಜಗಳು, ಗಣ್ಯರು, ಪತ್ರಿಕೆಗಳು, ಸಭೆ ಸಮಾರಂಭಗಳು, ಮದುವೆ, ಸಾವುಗಳು ನಮ್ಮನ್ನು ಒಂದುಗೂಡಿಸಲಿ. ನಮಗೆ ರಕ್ಷಕರಾಗಿ ನೀವು ನಿಲ್ಲಿರಿ. ನಿಮಗೆ ರಕ್ಷಕರಾಗಿ ನಾವು ನಿಲ್ಲುತ್ತೇವೆ. ಒಬ್ಬರನ್ನೊಬ್ಬರು ಪ್ರೀತಿಸುವ, ಅರಿತುಕೊಳ್ಳುವ ಸಹಬಾಳ್ವೆ ನಡೆಸುವ ಕಾರ್ಯ ಪ್ರವೃತ್ತರಾಗುವ.

**ಚೇಂದ್ರಿಮಾಡ ಗ. ಮುತ್ತಪ್ಪ, ಕೊಡಗ್ ಅಧ್ಯಯನ ಕೇಂದ್ರ ಕುಶಾಲನಗರ**

ಮಾನ್ಯರೆ,

ತಮ್ಮ ಪತ್ರಿಕೆ ಕೊಡಗು ಸಂಗಾತಿ ಉತ್ತಮವಾಗಿ ಮೂಡಿ ಬರುತ್ತಿದೆ. ನಮ್ಮ ಗೌಡ ಜನಾಂಗದ ವಿಚಾರದಲ್ಲಿ ಒಳ್ಳೆಯ ಕೆಲಸ ಮಾಡುತ್ತಿದೆ ಕೊಡಗು ಸಂಗಾತಿ ಇನ್ನು ಉತ್ತಮ ರೀತಿಯಲ್ಲಿ ಬೆಳಗಲಿ ಎಂದು ನನ್ನ ಹಾರೈಕೆ

ಶುದ್ಧ ಮನಸ್ಸು ಇದ್ದರೆ ನೋಡುವ ನೋಟವು ಶುದ್ಧ

**ತಿರುಮಲ ಸೋನ, ಸಂಪಾಜೆ**
☎ : 08272 - 34390

## ನಿಧನ

ಮಡಿಕೇರಿ ತಾಲ್ಲೂಕು ಅವಂದೂರು ಗ್ರಾಮದ ಪಟ್ಟಡ ಕುಟುಂಬಸ್ಥರ ಪಟ್ಟೆದಾರರಾದ **ಪಟ್ಟಡ ಉತ್ತಯ್ಯನವರು** ದಿನಾಂಕ 27-11-2001 ರಂದು ನಿಧನರಾದರು. ದಿವಂಗತರಿಗೆ 80 ವರ್ಷ ಪ್ರಾಯವಾಗಿತ್ತು. ಶ್ರೀಯತರು ಪತ್ನಿ, ನಾಲ್ಕು ಪುತ್ರರು, ಇಬ್ಬರು ಪುತ್ರಿಯರನ್ನಲ್ಲದೆ ಅಪಾರ ಬಂಧುವರ್ಗದವರನ್ನು ಅಗಲಿದ್ದಾರೆ.

- ರೀನಾ ಉಲ್ಲಾಸ, ಅವಂದೂರು

8ನೇ ಪುಟದಿಂದ

ವಾಗುತ್ತಿರುವುದು ಆಶ್ಚರ್ಯವೇನೂ ಅಲ್ಲ. ಧಾರ್ಮಿಕ ನಂಬಿಕೆಗಳಿಗನುಸಾರ ಸಮಾಜವು ತನ್ನ ಜೀವನ ನಿರ್ವಹಣೆ ಮಾಡುತ್ತದೆ. ಸಮಾಜಕ್ಕೆ ಧರ್ಮವು ರಕ್ಷಕ. ಧರ್ಮಶಾಸ್ತ್ರ ರಾಮಾಯಣ ಮಹಾಭಾರತ, ಭಗವದ್ಗೀತೆ ಮೊದಲಾದವುಗಳು ಸಮಾಜದ ಮುಖಂಡರುಗಳಿಗೆ ಅವಶ್ಯಕವಾದ ಗುಣಗಳನ್ನು ನೀಡುವುದರೊಂದಿಗೆ ನ್ಯಾಯದಿಂದ ಸಮಾಜಸೇವೆ, ಕುಕರ್ಮನಿರತರಾದ ದುಷ್ಟರಿಂದ ಶಿಷ್ಟರನ್ನು ರಕ್ಷಿಸುವುದು ವೈವಿಧ್ಯತೆಯಲ್ಲಿ ಏಕತೆಯನ್ನು ಕಾಣುವುದರಿಂದ ಧರ್ಮದುದ್ಧಾರವೂ ಆಗುವುದು ಮತ್ತು ಅದು ಎಲ್ಲರ ಧ್ಯೇಯಗಳಾಗಿರಬೇಕು.

**- ಬೈತಡ್ಕ ಬೆಳ್ಯಪ್ಪ, ಮಡಿಕೇರಿ.**

11ನೇ ಪುಟದಿಂದ

ಮಾತನಾಡೋಣ ಮನೆಯಲ್ಲಿ ಎಲ್ಲಿಗೂ ನಮಸ್ಕಾರ ತಿಳಿಸು. ಹೇಳಿದ್ದು ನೆನಪಿಟ್ಟುಕೋ ಆಯ್ತಾ?.......

**ಗೌರಿ :** ಅಲ್ಲಾ..... ನನ್ನ ಕುಕ್ಕೆ ನೋಡಿದ ತಕ್ಷಣ ಎಷ್ಟೊಂದು ವಿಷಯ ಗೊತ್ತಾಯ್ತು. ಹೌದು, ನಾನೂ ಎಲ್ಲಾ ಮಹಿಳೆಯನ್ನು ಸೇರಿಸಿ ಹೀಗೆ ಕಮಲಕ್ಕ ಹೇಳಿದ ಮಾತನ್ನು ನಮ್ಮ ಸರೋಜಕ್ಕಂಗೆ ತಿಳಿಸ್ತೀನಿ.... ಆಯ್ತು ಕಮಲಕ್ಕಾ ಹೋಗಿ ಬಾ....!

ಬರೆದು ನಡೆಸಿಕೊಟ್ಟವರು: **ಬೈತಡ್ಕ ಜಾನಕಿ ಬೆಳ್ಯಪ್ಪ** ಮತ್ತು **ಕುಲ್ಲಚನ ಜ್ಯೋತಿ ಕಾರ್ಯಪ್ಪ**

## ಮಲ್ಲಿಗೆ

ತುಂತುರು ಹನಿ ಬೀಳುತಿತ್ತು,
ಆಗ ತಾನೆ ಮಲ್ಲಿಗೆ ಅರಳುತಿತ್ತು ;
ಸುತ್ತಲೆಲ್ಲಾ ಸುವಾಸನೆ
ಅಡಿಯಿಟ್ಟೆ ಅತ್ತ ಮೆಲ್ಲನೆ
ನೆನಪಾಯಿತೊಂದು ಗಾದೆ
'ಹಸಿರ ರಾಶಿಯಲ್ಲಿ ಮೊಸರು ಚೆಲ್ಲಿದೆ
ಬಿರಿದರಳುತ್ತಿದ್ದವು ಮಲ್ಲಿಗೆ
ನಾಳಿನ ಚಿಂತೆಯೇ ಇಲ್ಲವುಗಳಿಗೆ
ಹೂವಿನ ಆ ರೂಪ....
ಅದುವೇ ಅದಕೆ ಶಾಪ!
ಇರೂರದು ಗಿಡದಲ್ಲೆ..... ಪಾಪ,
ಅರಿವಾಗದು ಅದರೊಡಲ ತಾಪ;
ಏರುವುದು ದೇವರ ಮುಡಿಗೆ
ಬೀಗುವುದು ಅದೃಷ್ಟದ ಬಾಳಿಗೆ
ಹೆಂಗಳೆಯರ ಕೇಶದ ನಡುವೆ
ಕಪ್ಪು-ಬಿಳುಪಿನ ಸಂದೇಶ ಸಾರುವೆ
ಆದರ್ಶವೂ ಅದೆಂದೂ ವಿಶ್ವಕ್ಕೆ
ಹೊಂದಿಕೊಳ್ಳುವುದು ತನ್ನಾದೃಷ್ಟಕೆ.

**ಮೂಡಗದ್ದೆ ಕೃಪಾ, ತಿತಿಮತಿ**

***ಕುದಿಯುವುದರೊಳಗೆ ಮೂರು ಸಾರಿ ಹಳಸಿದಂತೆ (ಅಭಿಪ್ರಾಯಗಳನ್ನು ಮೇಲಿಂದ ಮೇಲೆ ಬದಲಿಸುವ ಚಂಚಲ ಪ್ರವೃತ್ತಿ)***



ಎಸ್. ಪಿ. ಜಗದೀಶ್

## ಚಿರಸ್ಮರಣೆ

ನೀನು ನಮ್ಮನ್ನಗಲಿ ಎರಡು ವರ್ಷವಾದರೂ ಸದಾ ನಮ್ಮೊಂದಿಗೆ ನೀನಿರುವ ಭಾವನೆ ನಮ್ಮದು. ನಿನ್ನ ಮಾತುಗಳು, ನಗು, ನೆನಪು ನಮ್ಮ ಮನದಲ್ಲಿ ಸದಾ ಚಿರನೂತನವಾಗಿದೆ. ನಿನ್ನ ಆತ್ಮಕ್ಕೆ ದೇವರು ಸದಾ ಚಿರ ಶಾಂತಿಯನ್ನು ಕರುಣಿಸಲಿ ಎಂದು ಹಾರೈಸುವ.

ಜನನ : 28-5-1965
ನಿಧನ : 24-12-1999

ತಂದೆ, ತಾಯಿ, ಅಣ್ಣಂದಿರು ಮತ್ತು ಅಣ್ಣಂದಿರ ಮಕ್ಕಳು.
ಪ್ರಕಟಣೆ : ಸೂದನ ಮೋಹನ್, ಮೈಸೂರು - 302737



ಕೊಂಪುಳಿರ ಜಯಲಕ್ಷ್ಮಿ

## 3ನೇ ವಾರ್ಷಿಕ ಸ್ಮರಣೆ

ನೀನು ನನ್ನನ್ನಗಲಿ ಮೂರು ವರ್ಷಗಳು ಕಳೆದರು
ಸದಾ ನಿನ್ನ ಒಡನಾಟದ ನೆನಪಿಲ್ಲಿರುವ

ಜನನ : 26- 8-1928
ಮರಣ : 28-11-1998

ನಿನ್ನ ಪತಿ : **ಕೊಂಪುಳಿರ ಸೋಮಪ್ಪ,**
ನಿವೃತ್ತ ಡಿ.ಎಸ್.ಪಿ., ಕುಶಾಲನಗರ,

## ವಿಳಾಸ ಬದಲಾವಣೆ

ಕೊಡಗು ಸಂಗಾತಿಯ ಪ್ರಿಯಾ ಚಂದದಾರರೆ ತಮ್ಮ ಅಂಚೆ ವಿಳಾಸವು ಬದಲಾಗಿದ್ದರೆ ಕೂಡಲೇ 50 ಪೈಸೆ ಅಂಚೆಕಾರ್ಡಿನಲ್ಲಿ ಸಂಗಾತಿಗೆ ತಿಳಿಸಿ. ಹಾಗೆಯೇ ನವೀಕರಣಗೊಳ್ಳದೆ ಬಾಕಿ ಇರುವ ಹಿತೈಷಿ ಚಂದದಾರರು ಶೀಘ್ರದಲ್ಲಿ ನವೀಕರಿಸಿಕೊಳ್ಳುವುದು, 3, 4, ಜ್ಞಾಪನಪತ್ರ ಕಳುಹಿಸಿಯು ಆಗಿದೆ. 1-1-2000 ದಿಂದ 30-9-2001ರ ತನಕ ನವೀಕರಣಗೊಳಿಸಿರದಿದ್ದರೆ ಅವರಿಗೆ1-1-2002 ರಿಂದ ಪತ್ರಿಕೆಯನ್ನು ನಿಲ್ಲಿಸಲಾಗುವುದು. ಅನಿವಾರ್ಯವಾದರೆ ಹೆಸರನ್ನು ಪ್ರಕಟಿಸಲಾಗುವುದು. ಬಾಕಿಯನ್ನು ನೇರವಾಗಿ ಸಂಗಾತಿ ಕಛೇರಿಗೆ ಕಳುಹಿಸಿ ಕೊಟ್ಟಲ್ಲಿ ಸಂಗಾತಿ ಉಳಿವಿಗೊಂದು ಸಹಕಾರಿಯಾದಿತು.

- ಪಟ್ಟಡ ಶೀಲಾಮಣಿ,ಸಂಪಾದಕಿ



ಗೌರಮ್ಮ (ಸಸಿ)

## ನಿಧನ

ವೀರಾಜಪೇಟೆ ತಾಲ್ಲೂಕಿನ ಭದ್ರಗೋಳ ಗ್ರಾಮದ ಶ್ರೀ ಉಪ್ಪಂಡಿರ ಬಿದ್ದಪ್ಪನವರ ಧರ್ಮಪತ್ನಿ ಗೌರಮ್ಮ (ಸಸಿ) ನವರು ದಿನಾಂಕ17-11-2001ರಲ್ಲಿ ಅಕಾಲ ನಿಧನರಾದರು. ದಿವಂಗತರಿಗೆ 42 ವರ್ಷ ಪ್ರಾಯವಾಗಿದ್ದು ಮೈಸೂರು ಜಿಲ್ಲೆಯ ಟೀ ನರಸಿಪುರದಲ್ಲಿ ಆರೋಗ್ಯ ಶುಶ್ರೂಕಿಯಾಗಿ ಸೇವೆ ಸಲ್ಲಿಸುತ್ತಿದ್ದರು. ಮೃತರು ಕೊಪ್ಪ ನಿವಾಸಿ ದಿವಂಗತ ಪನ್ನೇಟಿ ದೇವಯ್ಯ ಪಾರೆಸ್ಟ್‌ರ್‌ನವರ ಮಗಳಾಗಿದ್ದು, ಪತಿ, ಪುತ್ರ, ಪುತ್ರಿ ಅಲ್ಲದೆ ಅಪಾರ ಬಂಧುವರ್ಗವನ್ನು ಅಗಲಿದ್ದಾರೆ.

ವರದಿ : ದೀಪಕ್ ಪಟ್ಟಡ, ಮೈಸೂರು.

ಮರಣ : 17-11-2001

**ಕೊಡಗು ಸಂಗಾತಿಯ ರಕ್ಷಣೆ ಮತ್ತು ಲಾಲನೆ ಪಾಲನೆ ಓದುಗರ,**
**ಹಿತಚಿಂತಕರ ಹಾಗೂ ಚಂದದಾರರಿಗೆ ಸೇರಿದೆ.**

- ಸಂಪಾದಕಿ

Reg. No. KA/SK/MYS-88 Registered : 10-01-96 TCI Kar. 09592

# ಗೌಡ ವಧು ವರರ ಮುಖಾಮುಖಿ ಸಮಾವೇಶ (Matrimonial Meet)

**(ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಬಾಂಧವರಿಗೊಂದು ಸುವರ್ಣಾವಕಾಶ)**

**ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ**(ರಿ.) ಮೊದಲನೆ 'ಸಿ' ಮುಖ್ಯ ರಸ್ತೆ, ಗಂಗಾನಗರ ಬಡಾವಣೆ, ಬೆಂಗಳೂರು-32, **ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಮಹಿಳಾ ಸಮಾಜ** (ರಿ.), ಮೈಸೂರು, **ಕೊಡಗು ಗೌಡ ಸಮಾಜ** (ರಿ.) ಮಡಿಕೇರಿ, **ಗೌಡ ಸಮಾಜ** (ರಿ.) ಮಂಗಳೂರು, ಇವರ ಸಂಯುಕ್ತ ಆಶ್ರಯದಲ್ಲಿ

ಪ್ರಪ್ರಥಮ ಬಾರಿಗೆ ವಿನೂತನ ರೀತಿಯ ವಧು-ವರರ ಮುಖಾಮುಖಿ ಕಾರ್ಯಕ್ರಮ ಮೈಸೂರಿನಲ್ಲಿ ನಡೆಯಲಿದೆ. ಅರ್ಹ ಬಾಂಧವರು ಇದರ ಸದುಪಯೋಗವನ್ನು ಪಡೆದುಕೊಳ್ಳುವಂತೆ ವಿನಂತಿ.

ಆಸಕ್ತರು ದಿನಾಂಕ5-12-2001 ರೊಳಗೆ ಈ ಕೆಳ ಕಾಣಿಸಿದ ವ್ಯಕ್ತಿಗಳನ್ನು ಅಥವಾ ಈ ಮೇಲೆ ಕಾಣಿಸಿದ ಸಮಾಜಗಳನ್ನು ಖುದ್ದಾಗಿ ಅಥವಾ ಅಂಚೆ ಮೂಲಕ ನೊಂದಾಯಿಸಿ ಕೊಳ್ಳತಕ್ಕದ್ದು. ವಧುವರರ ಕಡೆಯಿಂದ ಒಟ್ಟು ಇಬ್ಬರು (ವಧು-ವರರು)ಸೇರಿ ಭಾಗವಹಿಸಬಹುದು. ಪ್ರತಿ ಕುಟುಂಬವು ರೂ. 100/- ಅನ್ನು ಖುದ್ದಾಗಿ ಅಥವಾ ಡಿ.ಡಿ. ಮೂಲಕ ಈ ಮೇಲೆ ಕಾಣಿಸಿದ ವಿಳಾಸಕ್ಕೆ ಕಳುಹಿಸಿ ನೋಂದಾಯಿಸಿ ಕೊಳ್ಳುವುದು. (D. D. in favour of Kodagu Mathu Dakshina Kannada Gowda Samaja, Bangalore) ಇಬ್ಬರಿಗಿಂತ ಹೆಚ್ಚು ಸದಸ್ಯರು ಬರುವುದಿದ್ದರೆ ಪ್ರತಿಯೊಬ್ಬರಿಗೆ ರೂ. 50/- ನೀಡಿ ನೋಂದಾಯಿಸುವುದು. (ಮಕ್ಕಳಿಗೆ ಪ್ರವೇಶ ನಿರಾಕರಿಸಲಾಗಿದೆ.)

**ಸಮಾವೇಶ ನಡೆಯುವ ದಿನಾಂಕ : 16-12-2001, ಭಾನುವಾರ**

**ಸ್ಥಳ : ಹೋಟೆಲ್ ಸಿದ್ಧಾರ್ಥ, ಕೆ.ಎಸ್.ಆರ್.ಟಿ.ಸಿ. ಬಸ್ ನಿಲ್ದಾಣದ ಹತ್ತಿರ,**

**(ಛತ್ರಿಮರ ಮತ್ತು ಆರ್. ಗೇಟ್ ನಡುವೆ)**

**ಸಮಯ : ಪೂರ್ವಾಹ್ನ 9-30 ರಿಂದ ಮಧ್ಯಾಹ್ನ 2-00 ರ ತನಕ**

ವಧು ವರರ ಹೆಸರು, ಮನೆ ಹೆಸರು, ತಂದೆ, ತಾಯಿ ಹೆಸರು, ಹಾಲಿ ವಿಳಾಸ, ಕೆಲಸದ ವಿವರ, ವಿದ್ಯಾರ್ಹತೆ, ನಕ್ಷತ್ರ, ರಾಶಿ, ಗೋತ್ರ, ಪೂರ್ತಿ ಪ್ರಮಾಣದ ಪೋಟೋ ತಪ್ಪದೆ ಕಳುಹಿಸಬೇಕು. ಹೆಚ್ಚಿನ ವಿವರಗಳಿಗೆ ಈ ಕೆಳಗಿನವರನ್ನು ಸಂಪರ್ಕಿಸುವುದು

**ಬೆಂಗಳೂರು :**

ಡಾ. ಕೆ. ಎಂ. ಬೋಜಪ್ಪ, ☎ : 080 - 3334111
ನಂಗಾರು ನಿಂಗರಾಜು, ☎ : 080 - 3433328
ಕುಯ್ಯಮುಡಿ ಸುಶೀಲ ಉಲ್ಲಾಸ ☎ : 080 - 3410994
ಸುಳ್ಯಕೋಡಿ ವೈಶಾಲಿ ಅಮರನಾಥ, ☎ : 080 - 3601245, ☎ : 080 - 3605179
ಎಸ್. ತಿಮ್ಮಪ್ಪಗೌಡ, ☎ : 080 - 8384982
ರಮೇಶ್‌ಗೌಡ, ☎ : 080 - 3433014
ಬಡ್ಡನ ಲತಾ ಸಿದ್ಧಾರ್ಥ ☎ : 080 - 3492725
ತೆಕ್ಕಡೆ ಕಾವೇರಪ್ಪ ☎ : 080 - 5353937

**ಮೈಸೂರು :**

ಪಟ್ಟಡ ಶೀಲಾಮಣಿ, ಕೊಡಗುಸಂಗಾತಿ, ☎ : 0821 - 516771
ಪಾಣತ್ತಲೆ ಪಳಂಗಪ್ಪ, ☎ : 0821 - 562492
ದಂಬೆಕೋಡಿ ಭಾಗಿರಥಿ, ☎ : 0821 - 545595
ಕೆ. ಡಿ. ಮುತ್ತಮ್ಮ, ☎ : 0821 - 562411

**ಮಡಿಕೇರಿ :**

ಹೊಸೂರು ರಮೇಶ್ ಜೋಯಪ್ಪ, ☎ : 08272 - 23729, : 08272 - 28674
ಚೆಟ್ಟಿಮಾಡ ರಘುಪತಿ, ☎ : 08272 - 29906

**ಮಂಗಳೂರು :**

ನೂಜಿ ದಿನಕರಗೌಡ ☎ : 0824 - 427124

**ಸುಳ್ಯ :**

ಜಯಪ್ರಕಾಶ್, ಸುದ್ದಿ ಬಿಡುಗಡೆ, ☎ : 08257 - 20230
ಡಾ. ದೇವೀ ಪ್ರಸಾದ್, ☎ : 08257 - 71476

ಪ್ರಕಟಣೆ : ಕಾರ್ಯದರ್ಶಿ, ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ, ಬೆಂಗಳೂರು

**Kodagu Sangathi** Kannada Fortnightly Edited, Published, Printed & Owned by **Pattada P. Sheelamani, No. 35, Savitha Nilaya, I Cross, 4th Block, Jayalaxmipuram, Mysore - 12. ☎ : 0821/516771.** And Printed at Sri Guru Raghavendra Printers, 489, Devamba Agrahara, K. R. Mohalla, Mysore - 24. ☎ : 0821/431792.